ಕಾಯಕವೇ ಕೈಲಾಸ

# ಸಿದ್ಧಗಂಗಾ

ಸಂಪುಟ : ೫೧ ಜೂನ್ ೨೦೧೫ ಸಂಚಿಕೆ : ೦೬







ಅಮೇರಿಕಾದಿಂದ ಪ್ರಕಟವಾಗುತ್ತಿರುವ 'Hinduism Today' ಪತ್ರಿಕೆಯ ಪ್ರಧಾನ ಸಂಪಾದಕರಾದ ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳು ಹಾಗೂ ಅವರ ತಂಡ ಇತ್ತೀಚೆಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ **"The Best Hindu of the Year-2014"** ಪ್ರಶಸ್ತಿ ಫಲಕವನ್ನು ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ಅಮೇರಿಕಾದ ಸಂತರಾದ ಸಾಧಕ ಶ್ರೀ ಯೋಗೀನಾಥ ಸ್ವಾಮಿಗಳು ಉಪಸ್ಥಿತರಿದ್ದರು.



ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳು 108 ಬಗೆಯ ಪುಷ್ಪಗಳನ್ನು ಅರ್ಪಿಸಿ ಭಕ್ತಿ ಸಮರ್ಪಣೆ ಮಾಡಿದರು.



ಪರಮಪೂಜ್ಯ ಶ್ರೀ ಶ್ರೀಗಳವರು 108ನೇ ವರ್ಷಕ್ಕೆ ಪಾದರ್ಪಣೆ ಮಾಡಿದ ಶುಭ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಪಾದಪೂಜೆ ಮಾಡುವುದರ ಮೂಲಕ ಗುರುವಂದನೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಉಪಸ್ಥಿತರಿದ್ದರು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೧ ಜೂನ್ ೨೦೧೫ ಸಂಚಿಕೆ : ೬

## ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/-
ಆಜೀವ ಸದಸ್ಯತ್ವ ರೂ. ೧೫೦೦/- ಬಿಡಿ ಪ್ರತಿ ರೂ. ೧೨.೦೦



ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ

ವಿತರಕ :
ಆರ್.ಎಸ್. ಮಲ್ಲೇಶಪ್ಪ

ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -೫೭೨ ೧೦೪.

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

# 108ರ ಸಂಭ್ರಮ

ಪರಮಪೂಜ್ಯ ಶ್ರೀ ಶ್ರೀಗಳವರು ೧-೪-೨೦೧೫ರಂದು ೧೦೮ ವರ್ಷ ಮುಖಿಯಾದರು. ಭಕ್ತ ಜಗತ್ತಿಗೆ ಸಂಭ್ರಮ. ಕರ್ನಾಟಕದ ಉದ್ದಗಲದಲ್ಲಿ ಪೂಜ್ಯ ಶ್ರೀಗಳ ಜನ್ಮದಿನಾಚರಣೆ ಗುರುವಂದನ ಸಮಾರಂಭಗಳು, ಭಕ್ತಿ ಸಮರ್ಪಣೆಗೆ ಸಾವಿರ ರೂಪಗಳು. ೦೧-೦೪-೨೦೧೫ರಂದು ಶ್ರೀಮಠಕ್ಕೆ ಇಪ್ಪತ್ತೊಂದು ಸಾವಿರ ರೊಟ್ಟಿಗಳನ್ನು ಗಂಗಾವತಿ ತಾಲ್ಲೂಕಿನ ಶ್ರೀಮಠದ ಹಳೆಯ ವಿದ್ಯಾರ್ಥಿಗಳು ತಂದು ಸಮರ್ಪಿಸಿದರು. ತುಮಕೂರಿನ ಪ್ರತಿಷ್ಠಿತ ಶ್ರೀ ಸಿದ್ಧಾರ್ಥ ವಿದ್ಯಾಸಂಸ್ಥೆಯ ಕುಲಪತಿಗಳಾದ ಡಾ. ಶಿವಪ್ರಸಾದ್‌ರವರು ಭಕ್ತಿನುಡಿಗಳ ಪ್ರಶಸ್ತಿಪತ್ರ ಸಮರ್ಪಿಸುತ್ತ ಹತ್ತು ಲಕ್ಷ ರೂಗಳ ಕಾಣಿಕೆ ನೀಡಿದರು. ಮಾಜಿ ಸಚಿವರಾದ ಶ್ರೀ ಚೆನ್ನಿಗಪ್ಪನವರು ಒಂದು ಲಕ್ಷ ರೂಗಳ ಜೊತೆಗೆ ಅಕ್ಕಿ ಸಮರ್ಪಿಸಿದರು. ಭಕ್ತರೊಬ್ಬರು ಒಂದು ಲಾರಿ ಅಕ್ಕಿ ನೀಡಿದರು. ಅಂದು ಸಂಜೆ ತುಮಕೂರು ನಗರ ಪೂಜ್ಯ ಶ್ರೀಗಳವರ ಜನ್ಮದಿನಾಚರಣೆಯನ್ನು ಅಭೂತಪೂರ್ವವಾಗಿ ಸಿರಿಗೆರೆಯ ಪೂಜ್ಯ ಶ್ರೀಗಳವರ, ತುಮಕೂರಿನ ರಾಮಕೃಷ್ಣಾಶ್ರಮದ ಪೂಜ್ಯ ಶ್ರೀ ವೀರೇಶಾನಂದ ಶ್ರೀಗಳವರ, ಆದಿಚುಂಚನಗಿರಿ ಮಹಾಸಂಸ್ಥಾನದ ಪೂಜ್ಯ ಶ್ರೀಗಳವರ ಸಾನ್ನಿಧ್ಯದಲ್ಲಿ ಡಾ. ಹಂಪ ನಾಗರಾಜಯ್ಯನವರು ವಿದ್ವತ್ಪೂರ್ಣ ಉಪನ್ಯಾಸ ನೀಡಿದರು. ಇಡೀ ನಗರದ ತುಂಬಾ ಪರಮಪೂಜ್ಯ ಶ್ರೀಗಳವರ ಭಾವಚಿತ್ರಗಳ ಪ್ರದರ್ಶನದಿಂದ ಭಕ್ತಿಯ ಸಾವಿರಮುಖಗಳು ವಿಜೃಂಭಿಸಿದವು. ನಗರದ ಹಿರಿಯ ನಾಗರಿಕರು ಪ್ರಜಾಪ್ರಗತಿ ಪತ್ರಿಕೆಯ ಸಂಪಾದಕರಾದ ಶ್ರೀ ನಾಗಣ್ಣ, ನಿವೃತ್ತ ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಅವರ ಮುಂದಾಳತ್ವದಲ್ಲಿ ಶ್ರೀಗಳವರ ೧೦೮ನೇ ಜನ್ಮದಿನಾಚರಣೆಗೆ ಹೊಸದೊಂದು ಸೇವಾ ದಿಗಂತದ ಪರಿಚಯಿಸಿದರು.

ಅದೇ ದಿನ ಮಂಡ್ಯ ನಗರದಲ್ಲಿ ಪೂಜ್ಯ ಶ್ರೀಗಳವರ ಪವಿತ್ರ ನಾಮಾಂಕಿತದಲ್ಲಿ ಕಾಯಕಯೋಗಿ ಪ್ರತಿಷ್ಠಾನದ ಅಧ್ಯಕ್ಷ ಶ್ರೀ ಎಂ. ಶಿವಕುಮಾರ್ ಅವರ ನೇತೃತ್ವದಲ್ಲಿ ಉದ್ಯಾನವನವನ್ನು ಸಂಸದರಾದ ಶ್ರೀ ಪುಟ್ಟರಾಜು ಮತ್ತು ಮಾಜಿ ಶಾಸಕರಾದ ಶ್ರೀ ಆತ್ಮಾನಂದ, ನಗರ ಸಭಾಧ್ಯಕ್ಷರಾದ ಶ್ರೀ ಸಿದ್ಧರಾಜು ಹಾಗೂ ಹರಗುರುಚರಮೂರ್ತಿಗಳ ಸಮ್ಮುಖದಲ್ಲಿ ಉದ್ಘಾಟಿಸಿದರು. ಕೊಳ್ಳೆಗಾಲದಲ್ಲಿ ಪೂಜ್ಯ ಶ್ರೀಗಳ ದಿನಾಚರಣೆಯಲ್ಲಿ ಆಚರಿಸಿ ಪಟ್ಟಣದ ವಿಸ್ತರಣೆಯೊಂದಕ್ಕೆ ಶ್ರೀ ಶಿವಕುಮಾರನಗರವೆಂದು ನಾಮಕರಣ ಮಾಡಿದರು. ಗುಲ್ಬರ್ಗದಲ್ಲಿ ಶ್ರೀ ದೇವೇಂದ್ರಪ್ಪ ಆವಂಟಿಯವರ ಭಕ್ತಿಶ್ರದ್ಧೆಯ ಕಾರಣವಾಗಿ ಬಡಾವಣೆಯೊಂದು ಶ್ರೀ ಶಿವಕುಮಾರನಗರವಾಗಿ ದಾಖಲಾಯಿತು. ದಿನಾಂಕ ೧೪-೦೫-೨೦೧೫ರಂದು ಗಂಗಾವತಿ ಪಟ್ಟಣ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಪಟ್ಟಣದ ಯುವಜನಾಂಗದ ಅಭಿಮಾನಾಸಕ್ತಿಗಳಿಂದ ಪೂಜ್ಯಶ್ರೀಗಳ ೧೦೮ನೇ ಜನ್ಮದಿನಾಚರಣೆ ಹಾಗೂ ಗುರುವಂದನಾ ಸಮಾರಂಭವನ್ನು ಆಯೋಜಿಸಿ ಕೃತಾರ್ಥತೆಯನ್ನು ಅನುಭವಿಸಿದರು. ಅಲ್ಲದೆ ಶ್ರೀಮಠಕ್ಕೆ ಒಂದು ಲಾರಿ ಅಕ್ಕಿಯನ್ನು ಕಳುಹಿಸಿಕೊಟ್ಟರು. ಸಮಾರಂಭದಲ್ಲಿ ಶ್ರೀಮಠದ ಅಧ್ಯಕ್ಷರಾದ ಶ್ರೀ ಸಿದ್ಧಲಿಂಗಸ್ವಾಮಿಗಳು, ಕೊಪ್ಪಳದ ಗವಿಮಠದ ಪೂಜ್ಯ ಶ್ರೀಗಳು, ಗಂಗಾವತಿ ಕಲ್ಮಠದ ಪೂಜ್ಯ ಶ್ರೀಗಳು, ಕನಕಗಿರಿ ಸುವರ್ಣಗಿರಿ ಸಂಸ್ಥಾನಮಠದ ಪೂಜ್ಯ ಶ್ರೀಗಳು, ಹೆಬ್ಬಾಳದ ಶ್ರೀಗಳು, ಮರಕುಂದಿ ಮಠಳಿಯ ಪೂಜ್ಯಶ್ರೀಗಳು, ಹೊಸಪೇಟೆ ಹಂಸಾಂಬ ಶಾರದಾಶ್ರಮದ ಮಾತಾಪ್ರಬೋದಮಯಿಯವರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಧ್ಯಕ್ಷರಾದ ಡಾ. ಸಿ. ಸೋಮಶೇಖರ್ ಅವರು ಭಾಗವಹಿಸಿ ಸಮಾರಂಭಕ್ಕೆ ವಿಶೇಷತೆಯನ್ನು ತಂದು ಕೊಟ್ಟರು. ಪೂಜ್ಯಪಾದ ಶ್ರೀಶ್ರೀಗಳ ನೆನಪಿನಲ್ಲಿ ಬೃಹತ್ ಸಭೆ ಸಂಭ್ರಮಿಸಿತು. ಮತ್ತೊಂದು ವಿಶೇಷವೆಂದರೆ ಪೂಜ್ಯ ಶ್ರೀಗಳವರನ್ನು ಕುರಿತು ತಯಾರಿಸಿದ ಶ್ರೀ ಪರಮೇಶ್ ಜರಗನಹಳ್ಳಿ ಅವರ 'ಲೋಕಜಂಗಮ' ಸಾಕ್ಷ್ಯಚಿತ್ರದ ಪ್ರದರ್ಶನವೂ ನಡೆಯಿತು.

ದಿನಾಂಕ ೨೦-೦೫-೨೦೧೫ರಂದು ಸಕಲೇಶಪುರದ ಮಲೆನಾಡಿನ ತೊಟ್ಟಿಲು- ಶ್ರೀ ಮಲೆನಾಡು ವೀರಶೈವ ಸಮಾಜ(ರಿ) ಮತ್ತು ಅಂಗಸಂಸ್ಥೆಗಳ ವತಿಯಿಂದ ಪರಮಪೂಜ್ಯ ಶ್ರೀಶ್ರೀಗಳ ೧೦೮ನೇ ಜನ್ಮದಿನಾಚರಣೆ ಮತ್ತು ಗುರುವಂದನಾ ಸಮಾರಂಭ ಅವಿಸ್ಮರಣೀಯವಾಗಿ ಮೂಡಿಬಂದಿತು. ಕಲ್ಮಠ ಪೂಜ್ಯಶ್ರೀಗಳು, ಕಿರಿಕೊಡ್ಲಿ ಮಠದ ಪೂಜ್ಯ ಶ್ರೀಗಳು, ಸಂಕಲಾಪುರಮಠದ ಪೂಜ್ಯ ಶ್ರೀಗಳು ಭಕ್ತಿಸಮರ್ಪಣಾ ನುಡಿ ಗೌರವ ಸಲ್ಲಿಸಿದರು ಶ್ರೀಗಳಿಗೆ. ಸಾಣೆಹಳ್ಳಿ ಪೂಜ್ಯ ಡಾ॥ ಶ್ರೀ ಶ್ರೀ ಪಂಡಿತಾರಾಧ್ಯ ಶ್ರೀಗಳವರ ಮಾರ್ಗದರ್ಶನದಲ್ಲಿ 'ಉರಿಲಿಂಗಪೆದ್ದಿ' -ನಾಟಕದ ಪ್ರದರ್ಶನ ನಡೆಯಿತು.

ಪರಮಪೂಜ್ಯ ಶ್ರೀಶ್ರೀಗಳವರು ದಿನಾಂಕ ೦೩-೦೩-೧೯೩೦ರಿಂದ ಇಲ್ಲಿಯವರೆಗೆ ಶ್ರೀಮಠದ ಕೀರ್ತಿಯನ್ನು ದಶದಿಕ್ಕುಗಳೂ ಗಮನಿಸುವಂತೆ 'ಶಿವಯೋಗಿಯ ಶರೀರ ವೃಥಾ ಸವೆಯಲಾಗದು'- ಎಂಬ ತತ್ತ್ವದ ಬೆಳಕಿನಲ್ಲಿ ಪಸರಿಸುತ್ತಿರುವುದು ನಾಡಿನ ಪುಣ್ಯವೇ ಆಗಿದೆ. ನಾಡೂ ತಲೆಬಾಗಿ ನಮಿಸುತ್ತಿದೆ. ಕರುನಾಡಿನ ಪುಣ್ಯ ಭರತಭೂಮಿಯ ಭಾಗ್ಯ, ಮನುಕುಲದ ಮಂಗಳದ ಶಿವನಿಧಿಯಾಗಿ ಪರಮಪೂಜ್ಯ ಶ್ರೀಶ್ರೀಗಳವರು ನಮ್ಮನ್ನೆಲ್ಲ ಆಶೀರ್ವದಿಸುತ್ತಿದ್ದಾರೆ.

## ಪದ್ಮಭೂಷಣ ಶ್ರೀಗಳು

'ಬಯಸಿ ಬಂದುದು ಅಂಗಭೋಗ, ಬಯಸದೇ ಬಂದುದು ಲಿಂಗಭೋಗ' ಪರಮಪೂಜ್ಯ ಶ್ರೀಶ್ರೀಗಳಿಗೆ ಭಾರತ ಸರ್ಕಾರ **'ಪದ್ಮಭೂಷಣ'** ಪ್ರಶಸ್ತಿಯನ್ನು ಶ್ರೀಮಠಕ್ಕೆ ಬಂದು ಸಮರ್ಪಿಸಿತು. ಶ್ರೀಗಳವರು ನಿರ್ಲಿಪ್ತ ಮನಸ್ಕರಾಗಿ ಸ್ವೀಕರಿಸಿದರು. ಭಕ್ತಕೋಟಿ 'ಭಾರತರತ್ನ' ಪ್ರಶಸ್ತಿ ಕೊಡಬೇಕಾಗಿತ್ತು ಎಂದು ಆಶಿಸಿತು. ಯಾವುದಕ್ಕೂ ಶ್ರೀಗಳೇ 'ಸ್ಥಿತಪ್ರಜ್ಞ'ರಾಗಿ ಕಾಯಕ ದಾಸೋಹ ಸೇವಾಪಥಗಾಮಿಯಾಗಿ ಮುನ್ನಡೆದಿದ್ದಾರೆ.

– ಸಂಪಾದಕ







# ತಪಃಶ್ಶಕ್ತಿ



ಮಠಗಳಲ್ಲಿ ಮುಖ್ಯವಾಗುವುದು ಅಧಿಕಾರವಲ್ಲ, ಶೀಲ ಮತ್ತು ಸೇವೆ. ಅಂತಹ ಶೀಲ ಮತ್ತು ಸೇವೆಗಳಿಂದಲೇ ಅಧಿಕಾರ ಲಭಿಸುವುದು. ನಾವು ನಮ್ಮ ಹಿರಿಯ ಗುರುಗಳ ಆಜ್ಞೆಗನುಗುಣವಾಗಿ ನಮ್ಮ ಕೊನೆಯ ಉಸಿರಿನವರೆಗೆ ಮಠದ ಸೇವೆ ಸಲ್ಲಿಸುವುದು ನಮ್ಮ ಕರ್ತವ್ಯವಾಗಿದೆ. ಅದೇ ನಮಗೆ ಲಿಂಗಪೂಜೆ. ಮಠದ ಸೇವೆಯನ್ನು ಅಧಿಕಾರವೆಂದು ನಾವೆಂದೂ ಭಾವಿಸಿಲ್ಲ. ಸನ್ಯಾಸಿ ಲೌಕಿಕ ವಿಷಯಗಳ ಬಗ್ಗೆ ಎಚ್ಚರಿಕೆಯಿಂದಿರಬೇಕು. ಗುರು ಶಿಷ್ಯ ಸಂಬಂಧ ಆಧ್ಯಾತ್ಮಿಕವಾದದ್ದು. ಯಾವ ಶಿಷ್ಯನೇ ಆಗಲಿ ಗುರುವಿನ ಅಂತಃಕರಣಕ್ಕೆ ಪಾತ್ರನಾದಾಗ ಮಾತ್ರ ನಿಜವಾದ ಶಿಷ್ಯನಾಗಬಲ್ಲ. ಪವಿತ್ರ ಪರಂಪರೆಯ ಶಕ್ತಿಯನ್ನು ನಮ್ಮ ಹೃದಯಕ್ಕೆ ಆವಾಹಿಸಿಕೊಂಡು ಸ್ವಾಮಿತ್ವವನ್ನು ಉಳಿಸಿಕೊಳ್ಳಬೇಕು. ರಮಣಮಹರ್ಷಿ ಸಂಸ್ಥೆ ಕಟ್ಟಲಿಲ್ಲ, ಅರವಿಂದ ಘೋಷ್ ಕಟ್ಟಲಿಲ್ಲ. ತಮ್ಮ ತಪಃಶ್ಶಕ್ತಿಯಿಂದ ಅವರು ದೊಡ್ಡವರಾದರು. ತಪಕ್ಕಿಂತ ಮಿಗಿಲಾದ ಶಕ್ತಿ ಮತ್ತೊಂದಿಲ್ಲ. ಜನ ತಪಃಶ್ಶಕ್ತಿಯನ್ನು ಗೌರವಿಸುತ್ತಾರೆ, ಪರಂಪರೆಯನ್ನು ಗೌರವಿಸುತ್ತಾರೆ, ವ್ಯಕ್ತಿಯನ್ನಲ್ಲ. ಸ್ವಾಮಿ ಪರಂಪರೆಯ ಸಂಕೇತ ಮಾತ್ರವಲ್ಲ, ತಪಶ್ಶಕ್ತಿಯ ಪ್ರತೀಕ ಆಗಬೇಕು. ಆಧ್ಯಾತ್ಮ ವಿದ್ಯೆ ಓದಿನಿಂದಾಗಲಿ, ಬೋಧನೆಯಿಂದಾಗಲಿ ಸಾಧಿಸುವಂಥದಲ್ಲ. ಅದು ನಿತ್ಯಾನುಷ್ಠಾನದಿಂದ ಏಕಾಂತದ ಏಕಾಗ್ರತೆಯಿಂದ ಒದಗುವಂಥದು. ವಿರಕ್ತರ ಸಂಪತ್ತೆಂದರೆ ಪೂಜಾನಿಷ್ಠೆ. ಈ ಸಂಸ್ಥೆ ಹಾಗೂ ಇಲ್ಲಿಯ ದಾಸೋಹ ನಡೆಯುತ್ತಿರುವುದು ದಿನನಿತ್ಯದ ಕಾಯಕದಿಂದ. ಆಧ್ಯಾತ್ಮ ಸಾಧನೆ ಮಠಗಳ ಕಾರ್ಯಕ್ರಮದಲ್ಲಿ ಪ್ರಥಮ ಸ್ಥಾನ ಪಡೆಯಬೇಕು. ಅನ್ನದಾನ ವಿದ್ಯಾದಾನ ರೂಪದ ಕಾಯಕ ಸೇವೆ ತಪ್ಪಲ್ಲ. ಒಂದು ರೀತಿಯಲ್ಲಿ ಆಧ್ಯಾತ್ಮ ಸಾಧನೆಗೆ ಅವು ನೆರವಾಗಬಲ್ಲವು. ನಿಜವಾದ ಅಧ್ಯಾತ್ಮ ಸಾಧನೆಗೆ ನಿರ್ಲಿಪ್ತತೆ ಅಗತ್ಯ.

(ಕೃಪೆ : ಸಿದ್ಧಗಂಗೆಯ ಶಿವನಿಧಿ- ಡಾ. ದೇಜಗೌ- ಪ್ರಕಾಶನ- ಅಖಿಲ ಕರ್ನಾಟಕ ವಚನ ಸಾಹಿತ್ಯ ಪರಿಷತ್ತು(ರಿ,) ಅನಿಕೇತನ ರಸ್ತೆ, ಕುವೆಂಪುನಗರ, ಮೈಸೂರು)

## ಶ್ರೀ ಸಿದ್ಧಲಿಂಗೇಶ್ವರ ವಚನ



*ಸ್ಪಟಿಕದ ಘಟದೊಳಗೆಹೆಚ್ಚಿದ ಜ್ಯೋತಿ*
*ಒಳಹೊರಗೆಂದೆ ಸ್ವಯವಾಗಿ ಪ್ರಜ್ವಲಿಸುವಂತೆ*
*ಎನ್ನೊಳಗಿಪ್ಪಾತನು ಹೊರಗಿಪ್ಪಾತನು ಒಂದೇ ವಸ್ತುವೆಂಬ*
*ಆದ್ಯಂತವು ಕಾಣ ಬಂದಿತ್ತು ನೋಡಾ*
*ಆ ಪರಶಿವ ತತ್ವವೆ ಶರಣನು ತಾನೇ ನೋಡಾ*
*ಬೇರೊಂದು ಸ್ವರೂಪವಲ್ಲ ಕಾಣಾ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.*

ಪಳುಕಿನಭಾಂಡದಲ್ಲಿ ಮುಟ್ಟಿಸಿದ ದೀಪವು ಒಳಹೊರಗೆ ಒಂದೇ ಪ್ರಕಾರವಾಗಿ ಬೆಳಗುವ ಹಾಗೆ ಎನ್ನಂತರಂಗದಲ್ಲಿ ನೆಲೆಗೊಂಡು ಇರುವಂಥ ಪ್ರಾಣಲಿಂಗವು ಕಾಣಬಂದಿತ್ತು. ಅಂಗಪ್ರಾಣಂಗಳಿಗೆ ಇಷ್ಟ ಪ್ರಾಣಲಿಂಗವ ಸಂಬಂಧವ ಮಾಡಿಕೊಂಡು ಅವಿರಳ ಜ್ಞಾನಕ್ರಿಯ ವಿಡಿದಾಚರಿಸುವಂಥ ಆಚರಣೆಯು ಅರಿಯ ಬಂದಿತ್ತು. ಆನುಮಹಾಲಿಂಗ ತತ್ತ್ವವೆ ಶಿವಶರಣನು ತಾನೆ, ಬೇರೊದು ಜೀವರುಗಳ ಸಾಕಾರವಲ್ಲವು ನೋಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

### ಶ್ರೀವಾಣಿ

ರೈತನಿಗೆ ಸಗಣಿ ಚಿನ್ನಕ್ಕೆ ಸಮಾನವಾದುದು. ಆ ಚಿನ್ನ ಎಲ್ಲಿರಬೇಕೋ ಅಲ್ಲಿದ್ದಾಗಲೇ ಅದರ ಸಾರ್ಥಕತೆ. ಜೀವನಾವಶ್ಯಕವಾದ ಸಗಣಿಯಲ್ಲಿ ರೈತ ಪರಮಾತ್ಮನ ಕರುಣೆಯ ಪ್ರಸಾದವನ್ನು ಕಾಣುತ್ತಾನೆ. ಬೆಳೆವ ಪೈರಿಗೆ ಬೇಕಾದ ಜೀವ ದ್ರವ್ಯವಾದ ಸಗಣಿ ವ್ಯರ್ಥವಾಗಿ ಹೋಗಬಾರದೆಂದು ಪೂಜ್ಯಭಾವದಿಂದ ಕಾಣುತ್ತಾನೆ. ದಾರಿಯಲ್ಲಿ ಬಿದ್ದಿದ್ದ ಸಗಣಿಯನ್ನು ಕಂಡಾಗ ಅದನ್ನೆತ್ತಿ ಹೊಲಕ್ಕೆ ಹಾಕಿ – ಆ ಹೊಲ ತನ್ನದಲ್ಲವಾದರೂ ಮುನ್ನಡೆಯುತ್ತಾನೆ. ಸಗಣಿ ಜೀವದ್ರವ್ಯವೆಂಬ ಗುಣಗ್ರಾಹಿತ್ವ ಅವನದು.

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ಅಪ್ಪಿದೆ ತವಚರಣ ಒಪ್ಪಿದೆನುಡಿದಡಣ
ಬೆಪ್ಪಾದೆ ಬೆರಗಾದೆ ರಸಋಷಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯೋಗದೊಳು ಶಿವಯೋಗಮಹಾಯೋಗವೆನ್ನುವ
ಜಗದೊಳು ಸಂಚರಿಪ ಶಿವತೇಜ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ಯಶುದ್ಧದೇಹಿ ನಿತ್ಯಕಾರುಣ್ಯ ಚರಿತ
ಪ್ರೀತಿ ಪವಿತ್ರ ವಿಮಲಾತ್ಮ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನವರಿಗೆರಗುವೆ ನಿನ್ನವರಿಗೆ ಕರಗುವೆ
ನಿನ್ನವರ ನೀನೆಂದು ನಂಬುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀನು ಶತಕೋಟಿ ಸೂರ್ಯಕಿರಣಕತೀತನು
ನೀನು ಕರ್ಮಕದಳಿ ಕತ್ತಲೆಗೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮನದ ಮಂಚದ ಮೇಲೆ ಪವಡಿಸಿದ ಚೆಲುವನೆ
ಚಿತ್ತಚಿನ್ನ ಶುದ್ಧಶಿವದೀಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಉಪಮಿಸಬಾರದು ಆರಿಗೂ ನಮ್ಮುವ
ಉಪಮಿಸಲಾಗದು ತವಪದವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನೆನೆವ ಮನವ ಅತ್ತಿತ್ತ ಹೋಗದಂತೆ
ನಿಮ್ಮತ್ತಲಿರಿಸಯ್ಯ ಬೇಡುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮನೆ ಹಾಡುವೆ ನಿಮ್ಮನೆ ನೋಡುವೆ
ನಿಮ್ಮನೆ ಕಂಡು ಸುಖಿಸುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅನಿಕೇತನವಿದುಲವೆ ಆನಂದರೂಪವೆ
ನಾನು ಸೀಮೆಯಗೆದ್ದ ಶಿವಚೆಲುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





# ನಡೆದಾಡುವ ದೇವರಿಗೆ ನೂರೆಂಟು

## ಶ್ರೀಮಠದಲ್ಲಿ ಹಬ್ಬದ ಸಂಭ್ರಮ – ಹರಿದು ಬಂದ ಭಕ್ತ ಸಾಗರ

– ವರದಿ : ಎಚ್.ಎಸ್. ಸಿದ್ಧಗಂಗಪ್ಪ *



೧೦೮ನೇ ವರ್ಷಕ್ಕೆ ಪಾದಾರ್ಪಣೆ ಮಾಡಿದ ಶುಭ ಸಂದರ್ಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಪಾದಪೂಜೆ ಮಾಡುವುದರ ಮೂಲಕ ಗುರುವಂದನೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ವಿವಿಧ ಮಠಗಳ ಹರಗುರುಚರಮೂರ್ತಿಗಳು ಉಪಸ್ಥಿತರಿದ್ದರು.

ಏಪ್ರಿಲ್ ೧, ಶ್ರೀಮಠದ ಭಕ್ತರ, ಅಭಿಮಾನಿಗಳ ಪಾಲಿಗೆ ಸ್ಮರಣೀಯ ಪವಿತ್ರ ದಿನ. ತ್ರಿವಿಧ ದಾಸೋಹದ ಮೂಲಕ ಶ್ರೀ ಸಿದ್ಧಗಂಗಾ ಮಠದ ಕೀರ್ತಿಯನ್ನು ವಿಶ್ವಮಟ್ಟದಲ್ಲಿ ರಾರಾಜಿಸುವಂತೆ ಮಾಡಿದ ಮಹಾತಪಸ್ವಿಗಳೂ, ತ್ರಿವಿಧ ದಾಸೋಹಮೂರ್ತಿಗಳು, ಕಾಯಕಯೋಗಿಗಳು, ವಿಶ್ವವಿಭೂತಿ ಪುರುಷರು, ನಡೆದಾಡುವ ದೇವರೆಂದೇ ಜನಮಾನಸದಲ್ಲಿ ಹಚ್ಚ ಹಸಿರಾಗಿರುವ, ಬಸವಣ್ಣನವರ ತತ್ವ ಆದರ್ಶಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಕೋಟಿ ಕೋಟಿ ಜನ ಬಡ, ಹಿಂದುಳಿದ, ದೀನ ದಲಿತ ವಿದ್ಯಾರ್ಥಿಗಳ ಬಾಳಿಗೆ ಬೆಳಕಾಗಿ ಅವರ ಭವಿಷ್ಯವನ್ನು ರೂಪಿಸಿರುವ, ರೂಪಿಸುತ್ತಿರುವ ಕರ್ನಾಟಕ ರತ್ನ, ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮ ದಿನ. ೧೦೭ ವಸಂತಗಳನ್ನು ಮುಗಿಸಿ ೧೦೮ನೇ ವಸಂತಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಶುಭ ಸಂದರ್ಭದಲ್ಲಿ ಪೂಜ್ಯರಿಗೆ ಗುರುವಂದನೆ ಸಲ್ಲಿಸಿ ಧನ್ಯತೆಯನ್ನು ಪಡೆದುಕೊಳ್ಳಲು ನಾಡಿನ ಮೂಲೆ ಮೂಲೆಗಳಿಂದ ಸಹಸ್ರ ಸಹಸ್ರ ಭಕ್ತರು, ಅಭಿಮಾನಿಗಳು ಶ್ರೀಮಠಕ್ಕೆ ಆಗಮಿಸಿ ಪರಮಪೂಜ್ಯರನ್ನು ಕಣ್‌ತುಂಬಿಸಿ ಕೊಂಡು ಭಕ್ತಿ ನಮನಗಳನ್ನು ಸಲ್ಲಿಸಿ ಧನ್ಯತೆಯನ್ನು ಪಡೆದುಕೊಂಡರು.

* ನಂ. ೧೬೧೭, 'ಮಾತೃಶ್ರೀ', ಸರ್. ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು – ೫೬೦ ೦೯೧.

ಹಳೆಮಠದಿಂದ ೧೦೮ ಪೂರ್ಣಕುಂಭ ಕಳಶಗಳೊಂದಿಗೆ ಪರಮಪೂಜ್ಯ ಶ್ರೀ ಶ್ರೀಗಳವರನ್ನು ಮೆರವಣಿಗೆಯಲ್ಲಿ ವೇದಿಕೆಗೆ ಬರಮಾಡಿಕೊಳ್ಳುತ್ತಿರುವುದು.

ಕಳೆದ ೮೫ ವರ್ಷಗಳಿಂದ ಪರಮಪೂಜ್ಯರ ದಿನಚರಿಯಲ್ಲಿ ಕಿಂಚಿತ್ತು ವ್ಯತ್ಯಾಸವಾಗಿಲ್ಲ. ದಿನ ನಿತ್ಯದಂತೆ ಮುಂಜಾನೆ ೨–೧೫ಕ್ಕೆ ನಿದ್ರೆಯಿಂದ ಜಾಗೃತಗೊಂಡು ಸ್ವಲ್ಪ ಕಾಲ ಅಧ್ಯಯನ ಮಾಡಿ, ನಿತ್ಯ ಕರ್ಮಗಳನ್ನು ಮುಗಿಸಿ ೫.೩೦ ಗಂಟೆಗೆ ಶಿವಪೂಜೆ ಮುಗಿಸಿ, ಲಘು ಉಪಹಾರ ಸೇವಿಸಿದ ನಂತರ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಭಕ್ತಿಯಿಂದ ಪಾದಪೂಜೆ ಮಾಡಿ ಪುಷ್ಪವನ್ನು ಅರ್ಪಿಸಿ ಗುರುವಂದನೆ ಸಲ್ಲಿಸಿದರು. ಹಳೇ ಮಠದಲ್ಲಿ ನಡೆದ ಈ ಅವಿಸ್ಮರಣಿಯ ಕಾರ್ಯಕ್ರಮಕ್ಕೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಭಕ್ತರು ಸಾಕ್ಷಿಯಾದರು.

ವಿರೋಧಪಕ್ಷದ ನಾಯಕರಾದ ಶ್ರೀ ಜಗದೀಶ್ ಶೆಟ್ಟರ್ ಅವರಿಂದ ಭಕ್ತಿಸಮರ್ಪಣೆ

ಸೂರ್ಯೋದಯಕ್ಕೆ ಮುನ್ನವೇ ನಾಡಿನ ವಿವಿಧ ಮೂಲೆಗಳಿಂದ ಆಗಮಿಸಿದ ಭಕ್ತರು, ಅಭಿಮಾನಿಗಳು ಶ್ರೀಮಠದ ಅಂಗಳದಲ್ಲಿ ಪೂಜ್ಯರ ದರ್ಶನ ಪಡೆಯಲು ಭಕ್ತಿ ಭಾವದಿಂದ ಪೂಜ್ಯರ ಆಗಮನವನ್ನು ಎದುರು ನೋಡುತ್ತಿದ್ದರು. ಮುಂಜಾನೆಯ ಪ್ರಶಾಂತ ವಾತಾವರಣದಲ್ಲಿ ವಚನ ಗಾಯನ ಕೇಳುಗರ ಮನಸ್ಸಿಗೆ ಮುದ ನೀಡುತ್ತಿತ್ತು.

ಪರಮಪೂಜ್ಯರನ್ನು ಹಳೆಯ ಮಠದಿಂದ ಮೆರವಣಿಗೆಯಲ್ಲಿ ಶ್ರೀಮಠದ ಮುಂಭಾಗದಲ್ಲಿರುವ ಶ್ರೀ ಅಟವೀ ಸ್ವಾಮಿಗಳವರ ತೋರುಗದ್ದುಗೆಯ ಮುಂದೆ ನಿರ್ಮಿಸಲಾಗಿದ್ದ ವೇದಿಕೆಗೆ ಸುಮಂಗಲೆಯರು ೧೦೮ ಪೂರ್ಣ ಕಳಶ ಕುಂಭಗಳೊಂದಿಗೆ ಬರಮಾಡಿಕೊಂಡರು. ಭಕ್ತಿ ಭಾವ ತುಂಬಿದ ಈ ಮೆರವಣಿಗೆಯಲ್ಲಿ ಹರಗುರು ಚರಮೂರ್ತಿಗಳು ಗಣ್ಯರು ಭಾಗವಹಿಸಿದ್ದರು.

ವೇದಿಕೆಯ ಮೇಲೆ ಪರಮಪೂಜ್ಯ ಶ್ರೀ ಶ್ರೀಗಳವರು ಆಸೀನರಾಗುತ್ತಿದ್ದಂತೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ನೇತೃತ್ವದಲ್ಲಿ ಬೇಲಿಮಠದ ಶ್ರೀಗಳು, ಬಂಡೇಮಠದ ಶ್ರೀಗಳು, ಹೊನ್ನಮ್ಮಗವಿ ಮಠದ ಶ್ರೀಗಳು, ಅರಮೇರಿ ಕಳಂಚೇರಿ ಮಠದ ಶ್ರೀಗಳು ಸೇರಿದಂತೆ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಪಾದಪೂಜೆ ನೆರವೇರಿಸಿ ಗುರುವಂದನೆ ಸಲ್ಲಿಸಿದರು. ಈ ಅಪೂರ್ವ ದೃಶ್ಯಕ್ಕೆ ಸಹಸ್ರಾರು ಜನ ಭಕ್ತರು ಸಾಕ್ಷಿಯಾದರು. ಪೂಜ್ಯರಿಗೆ ಭಕ್ತಿ ನಮನ ಸಲ್ಲಿಸಿ ಶುಭ ಕೋರಿದರು. ಸರತಿಯಲ್ಲಿ ನಿಂತು ನಮಸ್ಕರಿಸಿ ಆಶೀರ್ವಾದ ಪಡೆದರು. ಪರಮಪೂಜ್ಯ ಶ್ರೀಗಳವರ ದರ್ಶನ ಪಡೆದು ಹುಟ್ಟು ಹಬ್ಬದ ಶುಭಾಶಯ ಕೋರಲು ನಾಡಿನ ಮೂಲೆ ಮೂಲೆಗಳಿಂದ ಸಾವಿರಾರು ಜನ ಭಕ್ತರು, ಅಭಿಮಾನಿಗಳು, ಗಣ್ಯರು, ರಾಜಕೀಯ ಮುಖಂಡರು ಆಗಮಿಸಿದ್ದರು. ಮಾಜಿ ಮುಖ್ಯಮಂತ್ರಿಗಳು, ವಿರೋಧಪಕ್ಷದ ನಾಯಕರೂ ಆದ ಶ್ರೀ ಜಗದೀಶ್ ಶೆಟ್ಟರ್ ಅವರು ಪರಮಪೂಜ್ಯರ ದರ್ಶನಾಶೀರ್ವಾದ ಪಡೆದು ನುಡಿ ನಮನಗಳನ್ನು ಸಲ್ಲಿಸಿದರು. ತಮ್ಮ ನುಡಿ ನಮನಗಳಲ್ಲಿ "ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಬಸವಾದಿ ಶರಣರ ಹಾದಿಯಲ್ಲಿ ೧೦೭ ವರ್ಷಗಳನ್ನು ಪೂರೈಸಿದ್ದು ಅಭಿಮಾನದ ಸಂಗತಿ ಪೂಜ್ಯರು ತೋರಿಸಿದ ಧರ್ಮ, ಸಾಮಾಜಿಕ ಬದಲಾವಣೆಯ ಹಾದಿಯಲ್ಲಿ ನಾವೆಲ್ಲ ಮುನ್ನಡೆಯಬೇಕಿದೆ. ೧೦೮ ವರ್ಷದ ಪೂಜ್ಯರ ದರ್ಶನ ಮಾಡುವುದೇ ನಮ್ಮ ಜೀವನದ ಒಂದು ಸೌಭಾಗ್ಯ" ಎಂದರು. ಸಹಕಾರ ಸಚಿವ ಶ್ರೀ ಹೆಚ್.ಎಸ್. ಮಹದೇವಪ್ರಸಾದ್ ಅವರು ತಮ್ಮ ನುಡಿ ನಮನದಲ್ಲಿ "ಪರಮಪೂಜ್ಯ ಶ್ರೀಗಳವರ ೧೦೮ನೇ ಜನ್ಮದಿನ ನಾಡಿನಲ್ಲೆಲ್ಲಾ ಹಬ್ಬದಂತೆ ನಡೆಯುತ್ತಿದೆ. ಸಮಾಜದ ಎಲ್ಲ ಸಮುದಾಯದವರು ಪೂಜ್ಯರ ಆಶೀರ್ವಾದ ಪಡೆಯಲು ಬಂದಿರುವುದು ಶ್ರೀಗಳವರ ಸೇವಾ ತತ್ಪರತೆಗೆ ಒಂದು ನಿದರ್ಶನ. ಸರಕಾರದ ಪರವಾಗಿ ಶ್ರೀಗಳವರಿಗೆ ಜನ್ಮದಿನದ ಅಭಿನಂದನೆ ಸಲ್ಲಿಸಿದ್ದು, ಈ ಹಿಂದೆ ನಾನು ಕನ್ನಡ ಮತ್ತು ಸಂಸ್ಕೃತಿ ಸಚಿವರಾಗಿದ್ದ ಸಂದರ್ಭದಲ್ಲಿ ಪೂಜ್ಯ ಶ್ರೀಗಳಿಗೆ 'ಕರ್ನಾಟಕ ರತ್ನ' ಪ್ರಶಸ್ತಿಯನ್ನು ಪ್ರದಾನ ಮಾಡುವ ಅವಕಾಶ ದೊರೆಕಿದ್ದು ನನ್ನ ಸುದೈವ" ಎಂದರು.

ಸಮಾಜ ಕಲ್ಯಾಣ ಸಚಿವ ಎಚ್. ಆಂಜನೇಯ ಅವರು ಪೂಜ್ಯರು ಸಮಾಜಕ್ಕೆ ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ತುಂಬು ಹೃದಯದಿಂದ ಶ್ಲಾಘಿಸುತ್ತಾ, "ವಿಶ್ವದ ಭೂಪಟದಲ್ಲಿ ಸಿದ್ಧಗಂಗಾ ಮಠದ ಹೆಸರನ್ನು ದಾಖಲೆಯಾಗುವಂತೆ ಸಾಧನೆ ಮಾಡಿರುವ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಶಿಕ್ಷಣ, ದಾಸೋಹ ಕ್ಷೇತ್ರದಲ್ಲಿ ಸರ್ಕಾರಕ್ಕೂ ಮಿಗಿಲಾದ ಸಾಧನೆ ಮಾಡಿದ್ದಾರೆ. ಭಕ್ತರ ಕಷ್ಟ, ಕೋಟಲೆಗಳನ್ನು ನೀಗಿಸುತ್ತಾ ಬಂದಿದ್ದಾರೆ. ಪೂಜ್ಯ ಶ್ರೀಗಳವರು ೨೧ನೇ ಶತಮಾನದ ಅಭಿನವ ಬಸವಣ್ಣ.

ಮಾಜಿ ಸಚಿವರಾದ ಶ್ರೀ ವಿ. ಸೋಮಣ್ಣನವರಿಂದ ಗೌರವ ಸಮರ್ಪಣೆ

ಮಾಜಿ ಸಚಿವರಾದ ಶ್ರೀ ಚನ್ನಿಗಪ್ಪನವರಿಂದ ಭಕ್ತಿ ಸಮರ್ಪಣೆ

ನಿ. ಪೊಲೀಸ್ ಮಹಾನಿರ್ದೇಶಕರಾದ ಶ್ರೀ ಶಂಕರ್ ಬಿದರಿ ಅವರಿಂದ ಗೌರವ ಸಮರ್ಪಣೆ

ನಿವೃತ್ತ ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್ ಅವರಿಂದ ಗೌರವ ಸಮರ್ಪಣೆ



ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರಿಂದ ಗೌರವ ಸಮರ್ಪಣೆ



ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ
ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯನವರಿಂದ ಉಭಯ ಕುಶಲೋಪರಿ.



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಮುಖ್ಯಮಂತ್ರಿಗಳವರಿಗೆ ಆಶೀರ್ವಾದ

ಅವರು ಭಕ್ತರ ಪಾಲಿಗೆ ನಡೆದಾಡುವ ದೇವರಾಗಿ, ಕಾಯಕಯೋಗಿಗಳಾಗಿ ಜ್ಞಾನ ಮತ್ತು ಅನ್ನ ದಾಸೋಹ ಮಾಡುತ್ತಿದ್ದಾರೆ. ವಿಶ್ವಗುರು ಬಸವಣ್ಣನವರ ಆದರ್ಶಗಳನ್ನು ಅನುಷ್ಠಾನಗೊಳಿಸುತ್ತಿರುವ ಪೂಜ್ಯರಿಗೆ ನಾಡು ಋಣಿಯಾಗಿದೆ. ಸರ್ಕಾರದ ಪ್ರತಿನಿಧಿಯಾಗಿ ೧೦೮ನೇ ಜನ್ಮ ದಿನಾಚರಣೆ ಸಂದರ್ಭದಲ್ಲಿ ಅವರನ್ನು ಗೌರವಿಸುವುದು ನನ್ನ ಭಾಗ್ಯ" ಎಂದರು.

ಕರ್ನಾಟಕ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾದ ಡಾ. ಜಿ. ಪರಮೇಶ್ವರ್ ಅವರು ತಮ್ಮ ನುಡಿ ನಮನದಲ್ಲಿ "ಸಿದ್ಧಗಂಗಾ ಶ್ರೀಗಳ ಕೊಡುಗೆ ಶಿಕ್ಷಣ ಕ್ಷೇತ್ರದಲ್ಲಿ ಅಪಾರವಾಗಿದೆ ಶ್ರೀಮಠದಲ್ಲಿ ಜಾತಿ, ಮತ, ಭೇದವಿಲ್ಲದೆ ಸಹಸ್ರ ಸಹಸ್ರ ಮಕ್ಕಳು ವ್ಯಾಸಂಗ ಮಾಡುತ್ತಿದ್ದು, ಅವರು ಕಳೆದ ೮೫ ವರ್ಷಗಳಿಂದ ನಾಡಿನ ಸಾಮಾಜಿಕ, ಶೈಕ್ಷಣಿಕ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಅನನ್ಯ ಸೇವೆಗೆ 'ಭಾರತ ರತ್ನ' ನೀಡಬೇಕೆಂದು" ಕೇಂದ್ರ ಸರ್ಕಾರವನ್ನು ಈ ಸಂದರ್ಭದಲ್ಲಿ ಒತ್ತಾಯಿಸಿದರು.

ಶ್ರೀಮಠದ ಪರಮ ಭಕ್ತರು, ಮಾಜಿ ಸಚಿವರೂ, ವಿಧಾನ ಪರಿಷತ್ ಸದಸ್ಯರೂ ಆದ ಶ್ರೀ ವಿ. ಸೋಮಣ್ಣನವರು 'ಸಿದ್ಧಗಂಗಾ ಪೂಜ್ಯ ಶ್ರೀಗಳವರ ೧೦೮ನೇ ಜನ್ಮ ದಿನಾಚರಣೆ ನೆನಪನ್ನು ಜನರ ಮನಸ್ಸಿನಲ್ಲಿ ಹಚ್ಚ ಹಸಿರಾಗಿಸುವಂತೆ ಮಾಡಲು ಜೂನ್ ತಿಂಗಳಿನಲ್ಲಿ ಗುರುವಂದನೆ ಕಾರ್ಯಕ್ರಮ ಆಯೋಜಿಸಿ ಪ್ರಧಾನಿ ಶ್ರೀ ನರೇಂದ್ರ ಮೋದಿಯವರನ್ನು ರಾಷ್ಟ್ರಪತಿ ಶ್ರೀ ಪ್ರಣವ್ ಮುಖರ್ಜಿ ಅವರನ್ನು ಆಹ್ವಾನಿಸಲಾಗುತ್ತಿದೆ. ಇದೇ ಸಂದರ್ಭದಲ್ಲಿ ರಾಜ್ಯದ ೩೦ ಜಿಲ್ಲೆಗಳಲ್ಲಿ ಜ್ಯೋತಿಯಾತ್ರೆ ಸಹ ನಡೆಸಲಾಗುವುದು' ಎಂದು ಹೇಳಿದರು. ಮಾಜಿ ಸಚಿವ ಶ್ರೀ ಸಿ. ಚನ್ನಿಗಪ್ಪ ಅವರು ತಮ್ಮ ನುಡಿ ನಮನದಲ್ಲಿ 'ಶಿವನನ್ನು ಕಾಣಬೇಕಾದರೆ ನಾವು ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಯವರಲ್ಲಿಗೆ ಬರಬೇಕು. ಅವರ ದರ್ಶನ ಮಾಡಿದರೆ ನಮ್ಮ ಎಲ್ಲ ಕಷ್ಟ ಕೋಟಲೆಗಳು ನಿವಾರಣೆಯಾಗುತ್ತದೆ ಎಂಬುದು ನನ್ನ ವೈಯಕ್ತಿಕ ಅಭಿಪ್ರಾಯ. ಈ ಪವಾಡ ನನ್ನ ಜೀವನದಲ್ಲಿಯೂ ನಡೆದಿದೆ' ಎಂದರು.

ಎಸ್.ಎಸ್.ಎಲ್.ಸಿ. ಪರೀಕ್ಷೆ ನಡೆಯುತ್ತಿದ್ದುದರಿಂದ ವಿದ್ಯಾರ್ಥಿಗಳಿಗೆ ತೊಂದರೆಯಾಗಬಾರದೆಂಬ ಉದ್ದೇಶ, ಕಳಕಳಿಯಿಂದ ೯ ಗಂಟೆಯ ನಂತರ ಕಾರ್ಯಕ್ರಮವನ್ನು ನಡೆಸಬಾರದೆಂದು ಪೂಜ್ಯ ಶ್ರೀಗಳವರು ಅದೇಶ ನೀಡಿದ ಹಿನ್ನೆಲೆಯಲ್ಲಿ ೯ ಗಂಟೆಗೆ ಸಾರ್ವಜನಿಕ ಕಾರ್ಯಕ್ರಮವನ್ನು





ಮುಕ್ತಾಯಗೊಳಿಸಲಾಯಿತು. ನಂತರ ಭಕ್ತರು ಸ್ವಾಮೀಜಿಯವರ ಕಛೇರಿಯಲ್ಲಿ ದರ್ಶನ ಪಡೆದು ಶುಭ ಹಾರೈಸಿದರು.

ಶ್ರೀ ಸಿದ್ಧಾರ್ಥ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಾ. ಜಿ. ಶಿವಪ್ರಸಾದ್ ಅವರು ಮಾತನಾಡಿ 'ಸಿದ್ಧಗಂಗೆಯು ಅನ್ನ, ಜ್ಞಾನ ದಾಸೋಹದ ಮಹಾಮನೆ. ೮೬ ವರ್ಷಗಳಿಂದ ಪರಮಪೂಜ್ಯ ಶ್ರೀಗಳವರು ಸಹಸ್ರಾರು ಬಡ, ದೀನ ದಲಿತ ಮಕ್ಕಳನ್ನು ಪ್ರೀತಿಯಿಂದ ಸಲಹಿ, ಬೆಳೆಸಿರುವ ಮಾತೃ ಹೃದಯಿ, ಪರಮಪೂಜ್ಯರು ಕಾಯಕಯೋಗಿಗಳು, ಮಹಾತಪಸ್ವಿಗಳು 'ಭಾರತ ರತ್ನ' ಪ್ರಶಸ್ತಿ ಅವರಿಗೆ ಸಲ್ಲಬೇಕು" ಎಂದರು.

### ೧೦ ಲಕ್ಷ ರೂ. ಕೊಡುಗೆ

ಡಾ. ಜಿ. ಶಿವಪ್ರಸಾದ್ ಅವರು ಇದೇ ಸಂದರ್ಭದಲ್ಲಿ ಶ್ರೀ ಸಿದ್ಧಾರ್ಥ ಶಿಕ್ಷಣ ಸಂಸ್ಥೆ ವತಿಯಿಂದ ೧೦ ಲಕ್ಷ ರೂ.ಗಳ ಕೊಡುಗೆಯನ್ನು ನೀಡಿದರು.

ಮಾಜಿ ಸಂಸದ ಶ್ರೀ ಜಿ.ಎಸ್. ಬಸವರಾಜು ಅವರು ತಮ್ಮ ನುಡಿ ನಮನದಲ್ಲಿ 'ಮಾನವೀಯತೆಯ ಪ್ರತಿರೂಪದಂತಿರುವ ಪರಮಪೂಜ್ಯ ಶ್ರೀಗಳವರು ಜಗತ್ತಿಗೆ ಬೆಳಕಾಗಿದ್ದಾರೆ. ಅವರ ಮಾರ್ಗದರ್ಶನದ ಮುಂಬೆಳಕಿನಲ್ಲಿ ನಾವೆಲ್ಲ ನಡೆಯೋಣ' ಎಂದರು.

ಪರಮಪೂಜ್ಯ ಶ್ರೀಗಳವರ ದರ್ಶನ ಪಡೆದು ಜನ್ಮ ದಿನೋತ್ಸವಕ್ಕೆ ಶುಭ ಹಾರೈಸಿದವರಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯ ಮೇಯರ್ ಶ್ರೀಮತಿ ಶಾಂತಕುಮಾರಿ, ತುಮಕೂರು ಸಂಸದ ಶ್ರೀ ಎಸ್.ಪಿ. ಮುದ್ದಹನುಮೇಗೌಡ, ಮಾಜಿ ಸಚಿವ ಶ್ರೀ ಸೊಗಡು ಶಿವಣ್ಣ, ಶಾಸಕ ಶ್ರೀ ಬಿ. ಸುರೇಶಗೌಡ, ಶ್ರೀ ಎಸ್. ರಫೀಕ್ ಅಹ್ಮದ್, ಶ್ರೀ ಬಿ.ವೈ. ರಾಘವೇಂದ್ರ, ನಿವೃತ್ತ ಪೊಲೀಸ್ ಅಧಿಕಾರಿಗಳಾದ ಶ್ರೀ ಶಂಕರ್ ಬಿದರಿ, ಶ್ರೀ ಜ್ಯೋತಿ ಪ್ರಕಾಶ್ ಮಿರ್ಜಿ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಧ್ಯಕ್ಷರಾದ ಡಾ. ಸಿ. ಸೋಮಶೇಖರ್, ಜಿಲ್ಲಾಧಿಕಾರಿ ಶ್ರೀ ಕೆ.ಎಸ್. ಸತ್ಯಮೂರ್ತಿ, ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಶ್ರೀ ಗೋವಿಂದರಾಜು, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಎಸ್.ಪಿ. ಕಾರ್ತಿಕ್‌ರೆಡ್ಡಿ, ಪ್ರವಾಸೋದ್ಯಮ ಇಲಾಖೆ ಆಯುಕ್ತ ಡಾ. ಪಿ.ಎಸ್. ಹರ್ಷ, ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀ ಜಿ. ನಾಗಸುಂದರ್ ಮೊದಲಾದ ಗಣ್ಯರು ಸ್ವಾಮೀಜಿಯವರ ದರ್ಶನಾಶೀರ್ವಾದ ಪಡೆದು ಶುಭ ಹಾರೈಸಿದರು.



ಸುಪ್ರಸಿದ್ಧ ಕಲಾ ತಂಡದವರಿಂದ ಸಂಗೀತ ಕಾರ್ಯಕ್ರಮ





ಸಮಾರಂಭದಲ್ಲಿ ಕಿಕ್ಕಿರಿದ ಭಕ್ತರು ಮತ್ತು ಅಭಿಮಾನಿಗಳು

## ಪ್ರಧಾನ ಮಂತ್ರಿ ಶ್ರೀ ಮೋದಿ ಅವರಿಂದ ಶುಭಾಶಯ

೧೦೮ ವಸಂತಕ್ಕೆ ಪಾದಾರ್ಪಣೆ ಮಾಡಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಪ್ರಧಾನ ಮಂತ್ರಿಗಳು ಶುಭಾಶಯ ಕೋರಿದ್ದಾರೆ. ಅವರು ಟ್ವೀಟ್‌ನಲ್ಲಿ ಇಡೀ ಜೀವನವನ್ನೇ ಸೇವೆಗೆ ಶ್ರೀಗಳು ಮುಡುಪಾಗಿಟ್ಟಿದ್ದಾರೆ ಎಂದು ತಿಳಿಸಿದ್ದಾರೆ.

## ಮುಖ್ಯ ಮಂತ್ರಿಗಳು ಭೇಟಿ

ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಅವರು ಏಪ್ರಿಲ್ ೧ರ ಸಂಜೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯರ ದರ್ಶನ ಪಡೆದು ಹುಟ್ಟು ಹಬ್ಬದ ಶುಭಾಶಯ ಕೋರಿದರು. ಅವರು ಈ ಸಂದರ್ಭದಲ್ಲಿ ಮಾತನಾಡಿ ಯಾವುದೇ ಜಾತಿ ಬೇಧವಿಲ್ಲದೆ ಎಲ್ಲ ಸಮುದಾಯದ ಗ್ರಾಮೀಣ ಪ್ರದೇಶದ ಬಡವ, ಕೆಳವರ್ಗದ ಮಕ್ಕಳಿಗೆ ಉಚಿತ ಶಿಕ್ಷಣ ನೀಡುವ ಮೂಲಕ ಮಕ್ಕಳು ಆದರ್ಶ ರೀತಿಯಲ್ಲಿ ಬದುಕುವುದನ್ನು ಶ್ರೀಗಳವರು. ಕಲಿಸಿದ್ದಾರೆ. ಪೂಜ್ಯಶ್ರೀಗಳವರು ಪವಾಡ ಪುರುಷರು. ೧೦೮ರ ವಯಸ್ಸಿನಲ್ಲೂ ನಿಚ್ಚಳವಾಗಿ ಕಣ್ಣು ಕಾಣಿಸುತ್ತದೆ. ಕಿವಿ ಕೇಳಿಸುತ್ತದೆ. ಜ್ಞಾಪಕ ಶಕ್ತಿ ಕುಂದಿಲ್ಲ. ಅವರ ಸೇವೆಗೆ ಭಾರತರತ್ನ ಪ್ರಶಸ್ತಿಯನ್ನು ನೀಡಬೇಕೆಂದು ಕೇಂದ್ರ ಸರ್ಕಾರಕ್ಕೆ ಮತ್ತೊಮ್ಮೆ ಶಿಫಾರಸ್ಸು ಮಾಡುವುದಾಗಿ ಹೇಳಿದರು. ಲಕ್ಷಾಂತರ ಆರ್ಥಿಕ ದುರ್ಬಲ ಮಕ್ಕಳಿಗೆ ಶಿಕ್ಷಣ ನೀಡಿ ಸ್ವಾವಲಂಬಿಯಾಗಿಸಲು ಶ್ರಮಿಸುತ್ತಿರುವ ಶ್ರೀಗಳು ೧೨೫ ವರ್ಷಗಳ ಕಾಲ ಬಾಳಿ ಬದುಕಬೇಕೆಂದು ಹಾರೈಸಿದರು. ಪೂಜ್ಯ ಶ್ರೀಗಳವರು ಗಾಂಧೀಜಿಯವರ ರೀತಿ ಸರಳ ಜೀವನವನ್ನು ನಡೆಸುವುದರ ಮೂಲಕ ನಮಗೆಲ್ಲ ಆದರ್ಶವಾಗಿದ್ದಾರೆ. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು, ಸಚಿವರಾದ ಶ್ರೀ ಟಿ.ಬಿ. ಜಯಚಂದ್ರ, ಶ್ರೀ ಎಚ್.ಎಸ್. ಮಹದೇವ ಪ್ರಸಾದ್, ಶಾಸಕ ಡಾ. ಎಸ್. ರಫೀಕ್ ಅಹಮದ್ ಮೊದಲಾದ ಗಣ್ಯರು ಹಾಜರಿದ್ದರು.

## *ದಾಸೋಹ*

ಶ್ರೀ ಸಿದ್ಧಗಂಗಾ ಕ್ಷೇತ್ರ ದಾಸೋಹದ ಮಹಾಮನೆ. ಲಕ್ಷ ಲಕ್ಷ ಜನರ ಹಸಿವನ್ನು ತಣಿಸುವ ಅನ್ನಪೂರ್ಣೇಶ್ವರಿಯ ಆವಾಸಸ್ಥಾನ. ಬಂದವರೆಲ್ಲ ಪ್ರಸಾದ ಸ್ವೀಕರಿಸಿ ಸಂತೃಪ್ತಿಯಿಂದ ಹೋಗಬೇಕೆಂಬುದು ಪರಮಪೂಜ್ಯರ ಆಶಯ. ಇಲ್ಲಿ ಜ್ಞಾನದ ಹಸಿವು ಹಾಗೂ ಹೊಟ್ಟೆ ಹಸಿವನ್ನು ತಣಿಸುವ ಸುಕ್ಷೇತ್ರ. ಏಪ್ರಿಲ್ ೧ರಂದು ಶ್ರೀಮಠಕ್ಕೆ ಆಗಮಿಸಿದ ಭಕ್ತರಿಗೆ ಸಿಹಿ ಮತ್ತು ಖಾರ ಪೊಂಗಲ್, ಉಪ್ಪಿಟ್ಟು, ಇಡ್ಲಿ, ಕೇಸರಿಬಾತ್ ಪ್ರಸಾದ ವಿತರಿಸಿದರೆ, ಮಧ್ಯಾಹ್ನ ಪಾಯಸ, ಬೂಂದಿ, ಚಿತ್ರಾನ್ನ, ಕೋಸಂಬರಿ, ಅನ್ನ, ಸಾಂಬಾರು, ಮಜ್ಜಿಗೆ ನೀಡಲಾಯಿತು. ಮಾಜಿ ಸಚಿವ ಶ್ರೀ ಸಿ. ಚನ್ನಿಗಪ್ಪ, ೧ ಲಕ್ಷ ರೂ. ಕಾಣಿಕೆ ಹಾಗೂ ಒಂದು ಲೋಡ್ ಅಕ್ಕಿಯನ್ನು ಸಮರ್ಪಿಸಿ ಧನ್ಯತೆಯನ್ನು ಪಡೆದರು. ಶ್ರೀಮಠದಲ್ಲಿ ವ್ಯಾಸಂಗ ಮಾಡಿದ ಗಂಗಾವತಿ ತಾಲ್ಲೂಕು ಕಾರಟಗಿಯ ವಿದ್ಯಾರ್ಥಿಗಳು ೩೦ ಸಾವಿರ ಜೋಳದ ರೊಟ್ಟಿಯನ್ನು ತಂದು ಪ್ರಸಾದದ ಜೊತೆಯಲ್ಲಿ ವಿತರಿಸಿ ಸಾರ್ಥಕ್ಯವನ್ನು ಪಡೆದರು.

## *ಮನೆ ಮನೆಗಳಲ್ಲಿ ಹಬ್ಬದ ಸಡಗರ*

ಮನೆ ಮನೆಗಳಲ್ಲಿ ಮನೆಯನ್ನು ಶುಭ್ರಗೊಳಿಸಿ, ರಂಗೋಲಿ ಬಿಟ್ಟು, ತಳಿರು ತೋರಣ ಕಟ್ಟಿ, ಸ್ವಾಮೀಜಿಯವರ ಭಾವಚಿತ್ರವನ್ನಿಟ್ಟು ಜ್ಯೋತಿ ಬೆಳಗಿಸಿ ಭಕ್ತಿ ನಮನಗಳನ್ನು ಸಲ್ಲಿಸಿದರು. ಸಿದ್ಧಗಂಗಾ ಜ್ಯೋತಿ ಮನೆ ಮನೆಗಳಲ್ಲಿ ಬೆಳಗಿತು.

## *ಬೀದಿ ಬೀದಿಗಳಲ್ಲಿ ಸಂಭ್ರಮ*

ಪರಮಪೂಜ್ಯರ ೧೦೮ನೇ ಜನ್ಮದಿನೋತ್ಸವ ಜಿಲ್ಲೆಯ ಅಷ್ಟೇ ಏಕೆ ಹೊರ ಜಿಲ್ಲೆಯ ಜನತೆಯ ಪಾಲಿಗೆ ವಿಶೇಷವಾಗಿತ್ತು. ದೇವಾಲಯಗಳು, ಶಾಲಾ ಕಾಲೇಜುಗಳು, ಪ್ರಮುಖ ರಸ್ತೆ, ಬಡಾವಣೆಗಳಲ್ಲಿ, ಬೀದಿ ಬೀದಿಗಳಲ್ಲಿ ಶ್ರೀಗಳವರ ಹುಟ್ಟು ಹಬ್ಬವನ್ನು ಸಡಗರ, ಸಂಭ್ರಮ, ಭಕ್ತಿಯಿಂದ ಆಚರಿಸಿ ಶುಭ ಕೋರಿದರು. ಹೆಸರುಬೇಳೆ, ಪಾನಕ, ನೀರು ಮಜ್ಜಿಗೆ, ಸಹ ವಿತರಿಸಿದರು. ಜನತೆ ಪೂಜ್ಯ ಶ್ರೀಗಳವರ ಮೇಲಿಟ್ಟ ಭಕ್ತಿಗೆ ಜ್ವಲಂತ ನಿದರ್ಶನವಾಗಿತ್ತು.

ಅನೇಕ ಗ್ರಾಮಗಳಲ್ಲಿ ಸ್ವಾಮೀಜಿಯವರ ಭಾವ ಚಿತ್ರವನ್ನು ಅಲಂಕೃತ ಎತ್ತಿನಗಾಡಿ, ಟ್ರ್ಯಾಕ್ಟರ್ ಮೇಲಿಟ್ಟು ನಂದಿಧ್ವಜ, ವೀರಗಾಸೆ, ಮಂಗಳವಾದ್ಯದೊಂದಿಗೆ ಮೆರವಣಿಗೆ ಮಾಡಿ ಭಕ್ತಿಯನ್ನು ಸಮರ್ಪಿಸಿದರು.

## ತುಮಕೂರಿನಲ್ಲಿ ಹಬ್ಬದ ವಾತಾವರಣ

ತುಮಕೂರು ನಗರದಲ್ಲಿ ಹಿಂದೆಂದೂ ಕಂಡರಿಯ ದಂತಹ ಹಬ್ಬದ ವಾತಾವರಣ. ನಗರದ ವಿವಿಧೆಡೆ ಗಳಲ್ಲಿ ಹಾಗೂ ನಗರಕ್ಕೆ ಹೊಂದಿಕೊಂಡಿರುವ ಹೆಬ್ಬೂರು, ಗೂಳೂರು, ಬೆಳ್ಳಾವಿ, ಮಲ್ಲಸಂದ್ರ, ಹಿರೇಹಳ್ಳಿ, ಕ್ಯಾತ್ಸಂದ್ರ, ಕೋರಾ ಹಾಗೂ ಅಂತರಸನಹಳ್ಳಿ ಸುತ್ತಮುತ್ತಲ ಹಳ್ಳಿಗಳಿಂದ ಪರಮಪೂಜ್ಯರ ಭಾವಚಿತ್ರ ಹೊತ್ತ ಹೂವಿನ ಪಲ್ಲಕ್ಕಿ, ಹೂವಿನಿಂದ ಅಲಂಕೃತಗೊಂಡ ವಾಹನಗಳ ಮೆರವಣಿಗೆ







ತುಮಕೂರಿನಲ್ಲಿ ನಡೆದ ಗುರುವಂದನಾ ಸಮಾರಂಭದಲ್ಲಿ ಪರಮಪೂಜ್ಯ ಶ್ರೀಗಳವರಿಗೆ ಗುರುವಂದನೆ ಸಲ್ಲಿಸುತ್ತಿರುವುದು.

ಆಕರ್ಷಣೀಯವಾಗಿತ್ತು. ನಗರದ ನಾಲ್ಕು ದಿಕ್ಕಿನಿಂದ ಶ್ರೀಗಳ ಭಾವಚಿತ್ರದ ಮೆರವಣಿಗೆ ವೈಭವದಿಂದ ನಡೆಯಿತು. ನಂದಿಧ್ವಜ ಕುಣಿತ, ವೀರಗಾಸೆಯ ಕುಣಿತದೊಂದಿಗೆ ಭಕ್ತರು ಭಾವಪರವಶರಾಗಿ ಹೆಜ್ಜೆ ಹಾಕಿದರೆ, ಕೆಲವರು ಕುಣಿದು ಕುಪ್ಪಳಿಸಿದರು. ಎಲ್ಲ ಮೆರವಣಿಗೆಗಳು ಸರ್ಕಾರಿ ಜೂನಿಯರ್ ಕಾಲೇಜು ಆವರಣಕ್ಕೆ ತಲುಪಿದವು. ನಗರದ ವಿವಿಧ ದೇವಾಲಯಗಳು, ಸಂಘ ಸಂಸ್ಥೆಗಳು ಪರಮಪೂಜ್ಯರ ಜಯಂತೋತ್ಸವವನ್ನು ಸಂಭ್ರಮದಿಂದ ಆಚರಿಸಿದವು.

## *ತುಮಕೂರು ನಾಗರಿಕರಿಂದ ಭಕ್ತಿ ಸಮರ್ಪಣೆ*

ಏಪ್ರಿಲ್ ೧ರ ಸಂಜೆ ಪೂಜ್ಯರ ಗುರುವಂದನೆ ಕಾರ್ಯಕ್ರಮವನ್ನು ಸರ್ಕಾರಿ ಜೂನಿಯರ್ ಮೈದಾನದಲ್ಲಿ ನಿರ್ಮಿಸಲಾಗಿದ್ದ ಬೃಹತ್ ವೇದಿಕೆಯಲ್ಲಿ ಅರ್ಥಪೂರ್ಣ ವಾಗಿ, ಜನಮಾನಸದಲ್ಲಿ ಹಚ್ಚ ಹಸಿರಾಗುವಂತೆ ಆಚರಿಸ ಲಾಯಿತು. ಕಾರ್ಯಕ್ರಮವನ್ನು ೧೦೮ ಜ್ಯೋತಿಗಳನ್ನು ಬೆಳಗಿಸುವುದರ ಮೂಲಕ ಉದ್ಘಾಟಿಸಿದ ಆದಿಚುಂಚನಗಿರಿ ಮಠಾಧೀಶರಾದ ಪೂಜ್ಯ ಶ್ರೀ ಶ್ರೀ ನಿರ್ಮಲಾನಂದ ಸ್ವಾಮೀಜಿಯವರು ತಮ್ಮ ನುಡಿ ನಮನಗಳಲ್ಲಿ ಪರಮಪೂಜ್ಯ ಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಅನನ್ಯ ಕೊಡುಗೆಯನ್ನು ತುಂಬು ಹೃದಯದಿಂದ ಶ್ಲಾಘಿಸಿ, ಶ್ರೀಗಳವರು ನೂರಾರು ಮಠಗಳ ಮಠಾಧೀಶರುಗಳಿಗೆ, ದೇಶದ ಯುವಕರಿಗೆ ಸ್ಫೂರ್ತಿಯ ಸೆಲೆಯಾಗಿದ್ದಾರೆ. ಮಠಗಳೂ, ಮಠಾಧೀಶರು ಹೇಗೆ ನಡೆದುಕೊಳ್ಳಬೇಕು. ಯಾವ ರೀತಿ ಇರಬೇಕು ಎಂಬುದಕ್ಕೆ ಮೇಲ್ಪಂಕ್ತಿ ಹಾಕಿಕೊಟ್ಟಿದ್ದಾರೆ ಎಂದು ತಮ್ಮ ಗುರುಗಳಾದ ಡಾ. ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು ಹೇಳುತ್ತಿದ್ದರು ಎಂದು ಈ ಸಂದರ್ಭದಲ್ಲಿ ನೆನಪಿಸಿಕೊಂಡರು. ಪ್ರಕೃತಿ ಹಾಗೂ ಶಾಸ್ತ್ರದ ಪ್ರಕಾರ ಮನುಷ್ಯನ ಆಯುಸ್ಸು ನೂರು ವರ್ಷ. ಪ್ರಕೃತಿ ಮತ್ತು ಶಾಸ್ತ್ರ ಎರಡನ್ನು ಮೀರಿ ಸ್ವಾಮೀಜಿಯವರು ೧೦೮ ವರ್ಷ ಬದುಕಿದ್ದಾರೆ. ಈ ಬದುಕು ದಿವ್ಯ ಪುರುಷರಿಗಷ್ಟೇ ಸಾಧ್ಯ ಎಂದು ನುಡಿದ ಶ್ರೀ ಶ್ರೀ ನಿರ್ಮಲಾನಂದ ಸ್ವಾಮಿಗಳು ನಾಡಿನ ಹಿರಿಯ ಚೇತನ. ತಮ್ಮ ಜೀವನವನ್ನು ಸಾಮಾಜಿಕ ಸೇವೆಗೆ ಮೀಸಲಿಟ್ಟು ನಿಸ್ವಾರ್ಥ ಸೇವೆಯನ್ನು ಸಲ್ಲಿಸುವ ಮಹಾನ್ ಶಕ್ತಿಯಾಗಿ ರೂಪುಗೊಂಡಿದ್ದಾರೆ. ಸಾವಿರಾರು ವಿದ್ಯಾರ್ಥಿಗಳಿಗೆ ಮಾತೃ ವಾತ್ಸಲ್ಯವನ್ನು ತೋರುವ ಕರುಣಾಮಯಿ ಎಂದರು.

ನುಡಿ ನಮನಗಳನ್ನು ಸಲ್ಲಿಸಿದ ಹಿರಿಯ ವಿದ್ವಾಂಸರಾದ ಡಾ. ಹಂಪ ನಾಗರಾಜಯ್ಯ ಅವರು "ಎರಡು ಶತಮಾನ ಬೆಳಗಿದ ಧರ್ಮಗುರು ಸಿದ್ಧಗಂಗೆಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ" ಎಂದು ಬಣ್ಣಿಸಿದರು. ಅವರು ಮಾತನಾಡುತ್ತಾ ಕಳೆದ ಶತಮಾನ ಹಾಗೂ ಈ ಶತಮಾನದಲ್ಲೂ ಭಕ್ತರಿಗೆ ಮಾರ್ಗದರ್ಶನ ಮಾಡುತ್ತಿರುವ ಶ್ರೀಗಳವರ ವ್ಯಕ್ತಿತ್ವ ಅನನ್ಯ. ಸಮಾಜಕ್ಕೆ ಕಾಲಕಾಲಕ್ಕೆ ಮಾರ್ಗದರ್ಶನ ಮಾಡುತ್ತಾ ಶಿಕ್ಷಣಮುಖಿಯಾಗಿ, ಗ್ರಾಮಮುಖಿಯಾಗಿ ಆದರ್ಶ ಮೆರೆದ ವ್ಯಕ್ತಿತ್ವ ಶ್ರೀಗಳವರದು. ಮಠಾಧಿಪತಿಗಳು ಗ್ರಾಮಮುಖಿಯಾಗ ಬೇಕೆಂಬ ಪೂಜ್ಯರ ಮಾತು ಮಹೋನ್ನತವಾದುದು ಎಂದು ನುಡಿದರು.

ಸಮಾರಂಭದ ದಿವ್ಯ ಸಾನ್ನಿಧ್ಯ ವಹಿಸಿದ್ದ ಸಿರಿಗೆರೆ ತರಳಬಾಳು ಜಗದ್ಗುರು ಡಾ. ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು ೧೦೮ ವರ್ಷದ ಸಾಧನೆ ಮಾಡಿರುವ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರಿಗೆ ಭಕ್ತರೇ 'ಭಕ್ತ ವಿಭೂಷಣ' ಪ್ರಶಸ್ತಿ ನೀಡಿ ಗೌರವಿಸಿದ್ದು ಸರ್ಕಾರದ ಪದ್ಮವಿಭೂಷಣ, ಭಾರತರತ್ನ, ಪ್ರಶಸ್ತಿಗಿಂತ 'ಭಕ್ತವಿಭೂಷಣ'ವೇ ಮಿಗಿಲಾದ ಗೌರವವೆನಿಸಿದೆ ಎಂದು ಅಭಿಪ್ರಾಯಪಟ್ಟರು. ನಾವಿಂದು ಧರ್ಮ ಮತ್ತು ವಿಜ್ಞಾನವನ್ನು ಅವಲೋಕಿಸಿದರೆ ವಿಜ್ಞಾನ ಅನೇಕ ಸೌಲಭ್ಯಗಳನ್ನು ನಮಗೆ ಒದಗಿಸಿದೆ. ಆದರೆ ಧರ್ಮದ ಸೂತ್ರವಿಲ್ಲದ ಮನುಷ್ಯನ ಬದುಕು ಹಸನಾಗಲು ಸಾಧ್ಯವಿಲ್ಲ' ಎಂದು ಹೇಳಿದರು.

"ಏಪ್ರಿಲ್ ೧ರಂದು ಪೂಜ್ಯ ಶ್ರೀಗಳವರನ್ನು ಆರಾಧಿಸುವ ಸುದಿನ. ಇವರ ಆದರ್ಶಗಳು, ಜೀವನ ಮೌಲ್ಯಗಳು ಇತರರಿಗೆ ಮಾರ್ಗದರ್ಶನ ತೋರುವ ಸಾಧ್ಯತೆಗಳಿದ್ದಂತೆ ಪಾರಮಾರ್ಥಿಕ ಹಾದಿಯಲ್ಲಿ ಸಾಗುತ್ತಾ ಅನೇಕ ಆದರ್ಶ ಮೌಲ್ಯಗಳನ್ನು

ಸಮಾಜಕ್ಕೆ ಸಾರುವ ಮೂಲಕ ಪೂಜ್ಯ ಶ್ರೀಗಳು ಎಲ್ಲರಿಗೂ ಆದರ್ಶನೀಯ ಎಂದು ನುಡಿದರು. ಶ್ರೀಗಳು ತಮ್ಮ ಜೀವನದಲ್ಲಿ ಪ್ರತಿಕ್ಷಣವೂ ಸಮಾಜದ, ರಾಷ್ಟ್ರದ ಅಭಿವೃದ್ಧಿಗೆ ಚಿಂತಿಸುವ ಮಹಾನ್ ಚಿಂತಕ. ಇತರರು ಸಾಧಿಸಲಾಗದ ಸಾಧನೆಯನ್ನು ಶ್ರೀಗಳು ಸಾಧಿಸಿ ಇಡೀ ಜಗತ್ತಿಗೆ ದಿವ್ಯ ಜ್ಯೋತಿಯಾಗಿ ಪ್ರೇರಣೆ ನೀಡುತ್ತಿದ್ದಾರೆಂದು ಶ್ಲಾಘಿಸಿದರು.

**ಗೌರವ ಸಮರ್ಪಣೆ**

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ತುಮಕೂರಿನ ಜನಾಭಿನಂದನಾ ಸಮಿತಿಯ ಪರವಾಗಿ ಭಕ್ತಿಯಿಂದ ಗೌರವ ಸಮರ್ಪಣೆ ಮಾಡಲಾಯಿತು. ತುಮಕೂರು ನಗರದ ಪರವಾಗಿ ಮೇಯರ್ ಶ್ರೀಮತಿ ಲಲಿತಾ ರವೀಶ್ ಶ್ರೀಗಳವರಿಗೆ ಭಕ್ತಿ ಸಮರ್ಪಣೆ ಸಲ್ಲಿಸಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ತುಮಕೂರಿನ ರಾಮಕೃಷ್ಣಾಶ್ರಮದ ಪೂಜ್ಯ ಶ್ರೀ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮಿಗಳು ಪರಮಪೂಜ್ಯ ಶ್ರೀ ಶ್ರೀಗಳವರ ಬದುಕು, ಸೇವೆ, ಜಂಗಮತತ್ತ್ವ, ಕಾಯಕ ತತ್ತ್ವಗಳನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಶ್ರೀಗಳವರು ಜಗತ್ತಿನ ಮನುಕುಲದ ಆಸ್ತಿ ಎಂದು ಬಣ್ಣಿಸಿದ ಶ್ರೀ ಶ್ರೀ ವೀರೇಶಾನಂದ ಶ್ರೀಗಳು ಪರಮಪೂಜ್ಯರ ಸಾರ್ಥಕ ಬದುಕನ್ನು ಬದುಕಿ ತೋರಿಸಿದ ಮಹಾನ ಸಾಧಕ. ಇಡೀ ಸಮಾಜದ ಕಲ್ಮಶವನ್ನು ತೊಳೆಯುವ ಆರೋಗ್ಯರತ್ನ ಎಂದು ನುಡಿದರು.

ಜನಾಭಿನಂದನ ಸಮಿತಿ ಅಧ್ಯಕ್ಷರು ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಕಾರ್ಯಾಧ್ಯಕ್ಷರೂ ಆದ ಡಾ. ಸಿ. ಸೋಮಶೇಖರ್ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಪ್ರಜಾಪ್ರಗತಿಯ ಸಂಪಾದಕ ಶ್ರೀ ಎನ್. ನಾಗಣ್ಣ ಅವರು ಸ್ವಾಗತಿಸಿದರು. ಡಾ. ಶಾಲಿನಿ ಅವರು ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಕೊಪ್ಪಲ್ ನಾಗರಾಜ್ ಅವರು ಶರಣ ಸಮರ್ಪಣೆ ಮಾಡಿದರು. ಕಾರ್ಯಕ್ರಮದ ನಂತರ ಶ್ರೀ ಟಿ.ಎಸ್. ಸಾಗರ್ ನೇತೃತ್ವದಲ್ಲಿ ಬಸವ ಸಂದೇಶ ಕುರಿತ ನೃತ್ಯರೂಪಕವನ್ನು ಪ್ರದರ್ಶಿಸಿದರು. ಗಾಯಕ ಶ್ರೀ ಮಲ್ಲಿಕಾರ್ಜುನ ಕೆಂಕೆರೆ ತಂಡದವರಿಂದ ಹಾಗೂ ಶ್ರೀ ಕಿಕ್ಕೇರಿ ಕೃಷ್ಣಮೂರ್ತಿ ಅವರು ಪರಮಪೂಜ್ಯ ಶ್ರೀ ಶ್ರೀಗಳವರನ್ನು ಕುರಿತ ಪ್ರಾರ್ಥನಾಗೀತೆಗಳನ್ನು ಪ್ರಸ್ತುತ ಪಡಿಸಿದರು.

ತುಮಕೂರಿನಲ್ಲಿ ನಡೆದ ಪರಮಪೂಜ್ಯ ಶ್ರೀ ಶ್ರೀಗಳವರ ಭಾವಚಿತ್ರದ ಭವ್ಯ ಮೆರವಣಿಗೆಯ ದೃಶ್ಯಗಳು

ಪರಮಪೂಜ್ಯರ ಜನ್ಮ ದಿನದಂದು ಹಳೆಯ ಮಠದಲ್ಲಿರುವ ನವಿಲು ಸಂತೋಷದಿಂದ ಗರಿ ಬಿಚ್ಚಿ ನರ್ತಿಸುತ್ತಿರುವುದು.





# ದಣಿವರಿಯದ ಚೇತನದ ೧೦೮ರ ನಡಿಗೆ.....

– ಪ್ರಶಾಂತ ರಿಪ್ಪನ್‌ಪೇಟೆ *

*ಸೇವೆ ಇದ್ದಲ್ಲಿ ಸಾಧನೆ ಇದೆ*
*ಸ್ವಾರ್ಥವಿದ್ದಲ್ಲಿ ವೇದನೆ ಇದೆ*
*ವೈರಾಗ್ಯದಲ್ಲಿರುವವ ಸೇವೆಯಲ್ಲಿದ್ದರೆ:*
*ವೈಭೋಗ ಬಯಸುವವ ಸ್ವಾರ್ಥದಲ್ಲಿ ಬದ್ಧಿಹನು*
*ಭೋಗ-ಸಂಭೋಗಕ್ಕಾಗಿ ಸ್ವಾರ್ಥದಲ್ಲಿ ಬಿದ್ದು*
*ಒದ್ದಾಡುವವರ ಕಂಡು ಮರುಕ ಪಡುವನು*
*ನಮ್ಮ ಕಾನ್ ಮಲ್ಲೇಶ್ವರ*

ಇಂದಿನ ದಿನಮಾನಗಳಲ್ಲಿ ಈ ವಚನದ ಮೊದಲ ಸಾಲನ್ನು ಅಕ್ಷರಶಃ ಅನ್ವಯಿಸುವುದು ಕಷ್ಟಸಾಧ್ಯ. ಆದರೂ ಅದನ್ನು ಅಕ್ಷರಶಃ ನಿಜಗೊಳಿಸಿದ ಅಪರೂಪದ ಸಾಧಕರೊಬ್ಬರು ನಮ್ಮ ನೆಲದಲ್ಲಿದ್ದಾರೆ. ಅವರು ಬೇರಾರೂ ಅಲ್ಲ, ಪೂರ್ಣ ಜೀವನವನ್ನೇ ಸಮಾಜಸೇವೆಗೆ ಮೀಸಲಾಗಿಟ್ಟಿರುವ ಸಿದ್ಧಗಂಗೆಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು. ಇವರು ವ್ಯಕ್ತಿಯಲ್ಲ, ಬ್ರಹ್ಮಾಂಡ ಶಕ್ತಿ ಎಂದೇ ನಂಬಿದೆ ಶಿಷ್ಯಕೋಟಿ. ಕರ್ನಾಟಕರತ್ನ, ಪದ್ಮಭೂಷಣ, ತ್ರಿವಿಧದಾಸೋಹಿ, ನಡೆದಾಡುವ ದೇವರು, ಶತಾಯುಷಿ ಹೀಗೆ ಮೆಚ್ಚುಗೆಯಿಂದ ಜನ ಕರೆದ ಹತ್ತು ಹಲವು ಬಿರುದಾಂಕಿತ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಿಗೆ ಏಪ್ರಿಲ್ ೧ ರಂದು ೧೦೮ರ ಹುಟ್ಟುಹಬ್ಬದ ಸಂಭ್ರಮ.

ಪ್ರತಿವರ್ಷ ಏಪ್ರಿಲ್ ೧ ಬಂತೆಂದರೆ ತುಮಕೂರು ಜಿಲ್ಲೆಯ ಸಿದ್ಧಗಂಗೆಯ ಮಠದ ವಾತಾವರಣ ಮದುವಣ ಗಿತ್ತಿಯಂತೆ ಸಿಂಗಾರಗೊಳ್ಳುತ್ತದೆ. ಈ ಸಿದ್ಧಿಪುರುಷನ ಅಂಗಳ ದಲ್ಲಿ ತ್ರಿವಿಧ ದಾಸೋಹವನ್ನುಂಡು ಬೆಳೆದು ದೇಶದ ನಾನಾ ಭಾಗಗಳಲ್ಲಿ ನೆಲೆಸಿರುವ ಲಕ್ಷಾಂತರ ಶಿಷ್ಯರು ಗುರುವಂದನೆ ಸಲ್ಲಿಸುವ ಮಹೋನ್ನತ ದಿನವಿದು.

ಬೆಂಗಳೂರು ಗ್ರಾಮಾಂತರ ಜಿಲ್ಲೆ ಮಾಗಡಿ ತಾಲ್ಲೂಕಿನ ವೀರಾಪುರ ಎಂಬ ಪುಟ್ಟಗ್ರಾಮದಲ್ಲಿ ೧೯೦೮ರ ಏಪ್ರಿಲ್ ೧ರಂದು ಜನಿಸಿದ ಶಿವಕುಮಾರ ಸ್ವಾಮಿಗಳ ಪೂರ್ವಾಶ್ರಮದ ಹೆಸರು ಶಿವಣ್ಣ. ಹೊನ್ನಪ್ಪ ಮತ್ತು ಗಂಗಮ್ಮ ದಂಪತಿಯ ಪುತ್ರ. ಸಿದ್ಧಗಂಗಾಮಠದ ಪರಿಸರ ಬಾಲ್ಯದಲ್ಲಿಯೇ ಅವರ ಮೇಲೆ ಪ್ರಭಾವ ಬೀರಿತ್ತು. ತಮ್ಮ ಬಿಡುವಿನ ವೇಳೆಯನ್ನು ಹೆಚ್ಚಾಗಿ ಕಳೆಯುತ್ತಿದ್ದುದು ಇದೇ ಸಿದ್ಧಗಂಗೆಯ ಪರಿಸರದಲ್ಲಿ. ೧೯೨೭ರಲ್ಲಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ತುಮಕೂರಿಗೆ ತೆರಳಿದ ಶಿವಣ್ಣ ಸಮಯ ಸಿಕ್ಕಾಗಲೆಲ್ಲಾ ಸಿದ್ಧಗಂಗೆಯ ಪರಿಸರಕ್ಕೆ ಭೇಟಿ ಕೊಡುತ್ತಿದ್ದರು. ಬೆಟ್ಟದ ಮೇಲಿರುವ ಸಿದ್ಧಲಿಂಗೇಶ್ವರ ಮಂದಿರದಲ್ಲಿ ಹಾಗೂ ತೀರ್ಥಭಾವಿ ಇರುವ ಗಂಗಾದೇವಿ ಗವಿಯಲ್ಲಿ ಕುಳಿತು ಗಂಟೆಗಟ್ಟಲೆ ಧ್ಯಾನ ಮಾಡುತ್ತಿದ್ದರು. ಆ ಕಾಲಕ್ಕೆ ಸಿದ್ಧಗಂಗೆಯ ಪುಣ್ಯಪೀಠವನ್ನಲಂಕರಿಸಿದ್ದವರು ಶ್ರೀ ಉದ್ದಾನ ಶಿವಯೋಗಿಗಳು. ಮಠದ ಮುಂದಿನ ಉತ್ತರಾಧಿಕಾರಿಗಳೆಂದು ಶ್ರೀ ಮರುಳಾರಾಧ್ಯರನ್ನು ನೇಮಿಸ ಲಾಗಿತ್ತು. ಪದೇಪದೇ ಮಠಕ್ಕೆ ಭೇಟಿ ನೀಡುತ್ತಿದ್ದ ಶಿವಣ್ಣ ನವರಲ್ಲಿ ವಿಶೇಷ ತೇಜಸ್ಸು ಇರುವುದನ್ನು ಮರುಳಾರಾಧ್ಯರು ಗಮನಿಸಿ ಅವರೊಂದಿಗೆ ಅತ್ಯಂತ ಸ್ನೇಹದಿಂದ ಬೆರೆಯು ತ್ತಿದ್ದರು.

ಅದೊಂದು ಕಾಲದಲ್ಲಿ, ನಗರದಲ್ಲಿ ಕಾಣಿಸಿಕೊಂಡ ಪ್ಲೇಗ್ ರೋಗದಿಂದಾಗಿ ಬಾಡಿಗೆ ರೂಮ್ ಬಿಟ್ಟ ಶಿವಣ್ಣ, ಮಠಕ್ಕೆ ಬಂದು ಶ್ರೀ ಉದ್ದಾನಶಿವಯೋಗಿಗಳ ಬಳಿ ವಾಸ್ತವ್ಯಕ್ಕೆ ಅವಕಾಶ ಮಾಡಿಕೊಡುವಂತೆ ಬೇಡಿಕೊಳ್ಳುತ್ತಾರೆ. ಆದರೆ ಶ್ರೀಗಳು ಕೂಡಲೆ ಅದಕ್ಕೆ ಒಪ್ಪದೆ ಪರಿಪರಿಯ ಪರೀಕ್ಷೆಗಳನ್ನು ನಡೆಸುತ್ತಾರೆ. ಶಿವಣ್ಣನವರ ಆಧ್ಯಾತ್ಮಿಕ ಆಸಕ್ತಿ, ಸಾಮಾಜಿಕ ಕಳಕಳಿ ಬಗ್ಗೆ ಮನವರಿಕೆಯಾದ ಬಳಿಕ, ಮೂರ್ನಾಲ್ಕು ತಿಂಗಳ ಮಟ್ಟಿಗೆ ಮಠದಲ್ಲಿ ವಾಸ್ತವ್ಯ ಮಾಡಲು ಅವಕಾಶ ಮಾಡಿಕೊಡುತ್ತಾರೆ. ಈ ಅವಧಿಯಲ್ಲಿ ಸ್ವಾಮಿಗಳ ಮೆಚ್ಚಿನ ಶಿಷ್ಯರಾಗಿ ಶ್ರೀ ಮರುಳಾರಾಧ್ಯರ ಮೆಚ್ಚಿನ ಸ್ನೇಹಿತರಾಗುತ್ತಾರೆ. ೧೯೨೭ರಲ್ಲಿ ಮುಂದಿನ ಶಿಕ್ಷಣಕ್ಕಾಗಿ ಬೆಂಗಳೂರಿಗೆ ಬಂದು ಗುಬ್ಬಿ ತೋಟದಪ್ಪನವರ ವಿದ್ಯಾರ್ಥಿ ನಿಲಯಕ್ಕೆ ಸೇರಿ ಸೆಂಟ್ರಲ್ ಕಾಲೇಜಿನಲ್ಲಿ ಭೌತಶಾಸ್ತ್ರ ಮತ್ತು ಗಣಿತ ಐಚ್ಛಿಕ ವಿಷಯದಲ್ಲಿ ಪದವಿ ಓದು ಮುಂದುವರಿಸುತ್ತಾರೆ.

ಸಿದ್ಧಗಂಗೆಯ ಉತ್ತರಾಧಿಕಾರಿಗಳಾಗಿ ನಿಯುಕ್ತರಾಗಿದ್ದ ಶ್ರೀ ಮರುಳಾರಾಧ್ಯರು ೧೯೩೦ರ ಜನವರಿ ೧೬ರಂದು ಲಿಂಗೈಕ್ಯರಾದ ಸುದ್ದಿ ತಿಳಿದ ಶಿವಣ್ಣ ಸಿದ್ಧಗಂಗೆಗೆ

* ಹವ್ಯಾಸಿ ಬರಹಗಾರರು, ವಿಜಯವಾಣಿ ದಿನಪತ್ರಿಕೆ.

ದೌಡಾಯಿಸಿದರು. ಮನನೊಂದಿದ್ದ ಶ್ರೀ ಉದ್ದಾನ ಶಿವಯೋಗಿಗಳು ಕೆಲಕಾಲ ಸಿದ್ಧಲಿಂಗೇಶ್ವರರ ಗದ್ದುಗೆ ಮುಂದೆ ಕುಳಿತು ಏಕಚಿತ್ತದಿಂದ ಪ್ರಾರ್ಥಿಸಿ ದಾಸೋಹ ಪರಂಪರೆಯ ಸಿದ್ಧಗಂಗೆಯ ಉತ್ತರಾಧಿಕಾರಿಯನ್ನು ನೀನೇ ನೀಡು ಎಂದು ಕೇಳಿ ಕೊಂಡಾಗ ಸಿದ್ಧಲಿಂಗೇಶ್ವರರು ಶ್ರೀ ಉದ್ದಾನಶಿವಯೋಗಿಗಳ ಕಣ್ಣ ಮುಂದೆ ತೋರಿಸಿದ ಏಕಮಾತ್ರ ಭಾವಚಿತ್ರ ಶಿವಣ್ಣ!

ಶ್ರೀ ಮರುಳಾರಾಧ್ಯರ ಅಂತಿಮ ಸಂಸ್ಕಾರ ಮುಗಿದ ಕೂಡಲೇ ನೆರೆದಿದ್ದ ಅಪಾರ ಭಕ್ತ ಸಮುದಾಯವನ್ನು ಉದ್ದೇಶಿಸಿ ಮಾತನಾಡಿದ ಶ್ರೀ ಉದ್ದಾನ ಶಿವಯೋಗಿಗಳು ಏಕಾಏಕಿ ಶಿವಣ್ಣನ ಮಸ್ತಕದ ಮೇಲೆ ಹಸ್ತವನ್ನು ಇಟ್ಟು, 'ಈ ಸತ್‌ಪರಂಪರೆಯನ್ನು ಮುನ್ನಡೆಸುವ ಭಾರ ಮತ್ತು ಜವಾಬ್ದಾರಿ ನಿನ್ನದು. ಇದು ನಮ್ಮ ಇಚ್ಛೆ, ಸಿದ್ಧಲಿಂಗೇಶ್ವರರ ಆಜ್ಞೆ, ಭಕ್ತರ ಅಪೇಕ್ಷೆ' ಎಂದುಬಿಟ್ಟರು.

ಹೆತ್ತವರನ್ನೂ ಕೇಳದೆ ಹಿಂದೆಮುಂದೆ ನೋಡದೆ ಶ್ರೀ ಗುರುವಿನ ಅಪ್ಪಣೆಯಂತಾಗಲಿ ಎಂದು ಶಿವಣ್ಣನವರೂ ಒಪ್ಪಿಗೆ ಸೂಚಿಸುತ್ತಾರೆ. ನಂತರ ವೀರಶೈವ ವಿರಕ್ತ ಪರಂಪರೆಯಂತೆ ದೀಕ್ಷೆ ಸ್ವೀಕರಿಸಿದ ಶಿವಣ್ಣನವರು, ಶ್ರೀ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾಗಿ ಶ್ರೀ ಶಿವಕುಮಾರ ಸ್ವಾಮಿಗಳು ಎಂಬ ನಾಮಾಂಕಿತರಾಗಿ ಸಿದ್ಧಗಂಗೆಯ ವಿರಕ್ತ ಪೀಠದ ಉತ್ತರಾಧಿಕಾರಿಗಳಾಗುತ್ತಾರೆ. ೧೯೩೦ರಿಂದ ಇಲ್ಲಿಯವರೆಗಿನ ೮೫ ವರ್ಷಗಳ ವಿರಕ್ತ ಜೀವನದಲ್ಲಿ ಪವಾಡವೆಂದರೆ ಶೂನ್ಯದಿಂದ ಏನನ್ನೋ ಸಂಪಾದಿಸುವುದಲ್ಲ; ಸಾಧನೆಯಿಂದ ಶಿಖರವನ್ನೇರುವುದು ಎಂಬುದನ್ನು ಅಕ್ಷರಶಃ ಸಾಧಿಸಿ ತೋರಿಸಿದ ಸಿದ್ಧಿ ಪುರುಷರು ಅವರು.

ಮಿತ ಆಹಾರ, ನಿದ್ರೆ, ಭಗವಂತನ ಧ್ಯಾನದೊಂದಿಗೆ ೧೦೮ ವರ್ಷಗಳ ತುಂಬು ಜೀವನ ನಡೆಸಿ ಮುನ್ನಡೆಯುತ್ತಿರುವ ಶಿವಕುಮಾರಸ್ವಾಮಿಗಳ ಜೀವನಶೈಲಿ ನಮ್ಮ ಯುವ ಸಮುದಾಯಕ್ಕೆ ಮಾದರಿಯೇ ಸರಿ. ಯಾವುದೇ ಪರಿಸ್ಥಿತಿ ಬಂದರೂ ಜೀವನಶೈಲಿಯನ್ನು ಬದಲಿಸಿಕೊಳ್ಳದ ಸ್ವಾಮೀಜಿ ಪೂರ್ವನಿಗದಿಯಂತೆ ಎಲ್ಲ ಕಾರ್ಯಕ್ರಮಗಳನ್ನು ಪೂರೈಸುತ್ತಾರೆ. ಮುಂಜಾನೆ ೩ಕ್ಕೆ ಆರಂಭವಾಗುವ ಅವರ ದಿನಚರಿಯಲ್ಲಿ ಒಂದು ದಿನವೂ ವ್ಯತ್ಯಯವಾಗಿಲ್ಲ. ೧೦ ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಇಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು, ಪ್ರತಿವರ್ಷ ಶಾಲಾ ದಾಖಲಾತಿ ಪ್ರಕ್ರಿಯೆಯಲ್ಲಿ ಸ್ವಾಮೀಜಿಯವರದ್ದೇ ಮುಖ್ಯ ಪಾತ್ರ. ಇಲ್ಲಿ ವಿದ್ಯಾಭ್ಯಾಸ ಮಾಡಿ ಹೋಗಿರುವ ಅದೆಷ್ಟೋ ಮಂದಿ ಐಎಎಸ್, ಐಪಿಎಸ್ ಸೇರಿದಂತೆ ಹಲವು ಉತ್ತಮ ಸ್ಥಾನಮಾನಗಳನ್ನು ಹೊಂದಿದ್ದಾರೆ. ಕವಿ, ಸಾಹಿತಿ, ಪತ್ರಕರ್ತ, ರಾಜಕಾರಣಿ, ಸಮಾಜಸೇವೆ ಹೀಗೆ ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಇದ್ದಾರೆ.

ಪ್ರತಿ ಮನುಷ್ಯನಿಗೂ ಒಂದಲ್ಲ ಒಂದು ರೀತಿಯ ನಿವೃತ್ತಿ ಇದೆ. ಪುಟ್ಟ ಕುಟುಂಬವನ್ನು ನಡೆಸುವ ಸಾಮಾನ್ಯ ವ್ಯಕ್ತಿ ಕೂಡಾ ಮಕ್ಕಳು ದೊಡ್ಡವರಾಗಿ ಅವರಿಗೆ ಸಂಸಾರದ ಜವಾಬ್ದಾರಿ ವಹಿಸಿ ತಾನು ವಿಶ್ರಾಂತ ಜೀವನ ನಡೆಸುತ್ತಾನೆ. ಆದರೆ ಸ್ವಾಮೀಜಿಯವರಿಗೆ ನಿವೃತ್ತಿಯೇ ಇಲ್ಲ. ೮೫ ವರ್ಷದಿಂದ ಅವಿಶ್ರಾಂತವಾಗಿ ಶ್ರೀಮಠ ಹಾಗೂ ಸಮಾಜದ ಸೇವೆಯಲ್ಲಿ ಕಾಯಕಯೋಗಿಗಳಾಗಿ ದುಡಿಯುತ್ತಿದ್ದಾರೆ. ಸ್ವಾಮೀಜಿಯವರು ಹೇಳುವಂತೆ– 'ವಿಶ್ರಾಂತಿ ಎಂದರೆ ಹಾಸಿಗೆ ಮೇಲೆ ಗಂಟೆಗಟ್ಟಲೆ ಮಲಗಿ ನಿದ್ರಿಸುವುದಲ್ಲ, ಒಂದು ಕೆಲಸದಲ್ಲಿ ಆಯಾಸವಾದರೆ ಅದನ್ನು ಬಿಟ್ಟು ಮತ್ತೊಂದು ಕೆಲಸ ಮಾಡುವುದು'. ಇದನ್ನು ಬದುಕಿನಲ್ಲೂ ಸಾಧಿಸಿ ತೋರಿದವರು ಅವರು.

ಸ್ವಾಮೀಜಿಯವರು ಪ್ರಶಸ್ತಿ ಪುರಸ್ಕಾರಗಳನ್ನು ಎಂದೂ ನಿರೀಕ್ಷಿಸಿದವರಲ್ಲ. ಆಡಳಿತಾರೂಢರನ್ನು ಓಲೈಸುವ, ಕಲುಷಿತ ರಾಜಕಾರಣವನ್ನು ಹತ್ತಿರಕ್ಕೆ ಬಿಟ್ಟುಕೊಳ್ಳುವ ಕೆಲಸವನ್ನು ಅವರು ಎಂದಿಗೂ ಮಾಡಿದವರಲ್ಲ. ಸೇವಾತತ್ಪರ, ಶ್ರೇಷ್ಠ ಸಂತ, ನಡೆದಾಡುವ ದೇವರು, ತ್ರಿವಿಧ ದಾಸೋಹಿ, ಕರ್ನಾಟಕರತ್ನ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ೧೦೮ನೇ ವರ್ಷಕ್ಕೆ ಕಾಲಿರಿಸುತ್ತಿರುವ ಈ ಸಂದರ್ಭದಲ್ಲಿ, ಇನ್ನೂ ಹಲವು ಕಾಲ ಅವರು ತಮ್ಮ ಸಮಾಜಸೇವೆಯನ್ನು ಹೀಗೆಯೇ ಮುಂದುವರೆಸಲಿ ಎಂದು ಶಿರಬಾಗಿ ನಮಿಸುತ್ತಾ ಆಶಿಸೋಣ.

*(ಕೃಪೆ : ವಿಜಯವಾಣಿ)*

**ಸಿದ್ಧಗಂಗಾ ಮಾಸಪತ್ರಿಕೆ ಚಂದಾದಾರರ ಗಮನಕ್ಕೆ**

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ನಮ್ಮ ಕಾರ್ಯಾಲಯಕ್ಕೆ ಹಿಂದಕ್ಕೆ ಬರುತ್ತಿವೆ. ತಾವು ದಯವಿಟ್ಟು ವಿಳಾಸ ಬದಲಾವಣೆಯಾದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ಇರುವ ಸರಿಯಾದ ವಿಳಾಸದ ಜೊತೆಗೆ ಮೊಬೈಲ್ ಫೋನ್‌ಸಂಖ್ಯೆ ಸಹ ಪತ್ರಿಕೆ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

–ಪ್ರಕಾಶಕರು





## ವೀರಾಪುರ ಹಣತೆ ವಿಶ್ವವನ್ನೇ ಬೆಳಗಿತು ... ನಡೆದಾಡುವ ದೇವರಿಗೆ ೧೦೮ರ ಸಂಭ್ರಮ

– ಯಶವಂತ್, ಬಿ.

**ಪ್ರತಿದಿನ ೨ ಗಂಟೆಗೆ ಎದ್ದು ಹಲವು ಕೃತಿಗಳನ್ನು ಅಲ್ಪ ಸಮಯದಲ್ಲಿಯೇ ಓದುತ್ತಾರೆ. ನಂತರದಲ್ಲಿ ಸತತವಾಗಿ ಸುಮಾರು ೨-೩ ಗಂಟೆ ಸಮಯದಲ್ಲಿ ಶಿವಪೂಜೆ ಮಾಡುತ್ತಾರೆ. ೭ ಗಂಟೆಯ ನಂತರದಲ್ಲಿ ಲಘು ಉಪಾಹಾರವನ್ನು ಮುಗಿಸಿ ಶ್ರೀಮಠದಲ್ಲಿ ನಡೆಯುತ್ತಿರುವ ಕೆಲಸ ಕಾರ್ಯಗಳತ್ತ ಗಮನ ಹರಿಸುತ್ತಾರೆ. ಮಧ್ಯಾಹ್ನದ ಸಮಯದಲ್ಲಿ ಧ್ಯಾನ ಮುಗಿಸಿಕೊಂಡು ರಾತ್ರಿ ಹತ್ತು ಗಂಟೆಯವರೆಗೂ ಲೋಕಕಲ್ಯಾಣಕ್ಕಾಗಿಯೇ ದುಡಿಯುತ್ತಾ ಶ್ರೀಮಠದಲ್ಲಿ ನೆಲೆಸಿರುವ ಮಕ್ಕಳಿಗೆ ಯಾವುದೇ ರೀತಿಯ ತೊಂದರೆಗಳಾಗದ ರೀತಿಯಲ್ಲಿ ವ್ಯವಸ್ಥೆ ಕಲ್ಪಿಸಿರುತ್ತಾರೆ. ರಾತ್ರಿ ಹತ್ತು ಗಂಟೆಯ ನಂತರ ಪ್ರಸಾದ ಸ್ವೀಕರಿಸಿ ಹನ್ನೊಂದು ಗಂಟೆಗೆ ನಿದ್ರೆಗೆ ಜಾರುತ್ತಾರೆ.**

**ಕಾ**ಯಕಯೋಗಿ ನಡೆದಾಡುವ ದೇವರು, ತ್ರಿವಿಧ ದಾಸೋಹಿ, ಪದ್ಮವಿಭೂಷಣ, ಶ್ರೀ ಸಿದ್ಧಗಂಗಾ ಮಠಾಧೀಶರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರು ಇಂದು ೧೦೮ನೇ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಶುಭ ಸಂದರ್ಭದಲ್ಲಿ ಶ್ರೀ ಕ್ಷೇತ್ರ ಹಾಗೂ ತುಮಕೂರು ನಗರ ಸೇರಿದಂತೆ ನಾಡಿನ ಹಲವೆಡೆ ಸಾರ್ವಜನಿಕರು, ಅಸಂಖ್ಯಾತ ಭಕ್ತ ವೃಂದದಲ್ಲಿ ಹಬ್ಬದ ವಾತಾವರಣ ಮೂಡಿಸಿದೆ.

ಪರಮಪೂಜ್ಯ ಶ್ರೀಗಳ ಹುಟ್ಟುಹಬ್ಬಕ್ಕೆ ರಾಜ್ಯದ ಮೂಲೆ ಮೂಲೆಯಿಂದಲ್ಲದೆ ದೇಶ-ವಿದೇಶಗಳಿಂದಲೂ ಹಿನ್ನೆಲೆಯಲ್ಲಿ ಭಕ್ತಸಾಗರವೇ ಮಠದತ್ತ ಹರಿದುಬರುತ್ತಿದೆ. ಮಠದ ಆವರಣ ಹಾಗೂ ತುಮಕೂರು ನಗರದ ರಸ್ತೆಗಳಲ್ಲಿ ಶ್ರೀಗಳ ಹುಟ್ಟುಹಬ್ಬಕ್ಕೆ ಶುಭಾಶಯ ಕೋರುವ ಫ್ಲೆಕ್ಸ್, ಬ್ಯಾನರ್‌ಗಳು ರಾರಾಜಿಸುತ್ತಿವೆ. ಕೆಲವು ರಸ್ತೆಗಳಲ್ಲಿರುವ ದೊಡ್ಡ ದೊಡ್ಡ ಕಟ್ಟಡಗಳು ವರ್ಣರಂಜಿತ ವಿದ್ಯುದ್ದೀಪಗಳಿಂದ ಅಲಂಕೃತಗೊಂಡಿವೆ.

ಕರುನಾಡಿನ ಶಿಶುವಾಗಿ ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿನ ವೀರಾಪುರ ಗ್ರಾಮದಲ್ಲಿ ೧-೪-೧೯೦೮ ರಂದು ಜನಿಸಿ, ಓದು ಬರಹದಲ್ಲಿ ಕುಶಾಗ್ರಮತಿಯಾಗಿದ್ದ ಶ್ರೀಗಳು ಬಾಲ್ಯದಲ್ಲೇ ಮಠದ ಹಿರಿಯ ಸ್ವಾಮೀಜಿಗಳಾದ ಉದ್ದಾನ ಮಹಾಶಿವಯೋಗಿಗಳವರ ಕೃಪಾದೃಷ್ಟಿಗೆ ಒಳಗಾಗಿದ್ದರು. ದಿನಾಂಕ ೩-೩-೧೯೩೦ ರಂದು ಗುರುವಿನ ಆದೇಶದಂತೆ ದೀಕ್ಷೆ ಪಡೆದು ಗುರುವಿನ ಆಜ್ಞೆಯನ್ನು ಪಾಲಿಸುತ್ತಾ, ೧೧-೦೧-೧೯೪೧ ರಿಂದ ಶ್ರೀ ಮಠದ ಸೇವಾ ಕ್ಷೇತ್ರದ ಪೂರ್ಣ ಜವಾಬ್ದಾರಿಯನ್ನು ಪಡೆದು ಸಮಾಜದ ಮುಡಿಗೆ ಅಲ್ಪವಾದುದನ್ನು ಮಹತ್ತರವಾಗುವಂತೆ ಅವಿರತ ಶ್ರಮದೊಂದಿಗೆ ದುಡಿಯುತ್ತಿರುವ ಶಿವಯೋಗಿಯೇ ಇಂದು ಜಗವೇ ಅಚ್ಚರಿಗೊಳ್ಳುವ ತರಹ ಸಮಾಜಕ್ಕೆ ಸಂಪದವಾಗಿರುವ ಮಹಾಜ್ಯೋತಿ ತ್ರಿವಿಧ ದಾಸೋಹಿ, ನಡೆದಾಡುವ ದೇವರು ಡಾ. ಶ್ರೀ ಶಿವಕುಮಾರ ಮಹಾಸ್ವಾಮೀಜಿಗಳಿಗೆ ಇಂದಿಗೆ ೧೦೮ರ ಹರಯ.

ದೈನಂದಿನ ಚಟುವಟಿಕೆಗಳಲ್ಲಿ ಇಂದಿಗೂ ಉತ್ಸಾಹ ಕಿಂಚಿತ್ತೂ ಕುಗ್ಗಿಲ್ಲ. ಅಗಾಧವಾದ ನೆನಪಿನ ಶಕ್ತಿಯನ್ನು ಹೊಂದಿ, ನಯನಗಳಿಂದ ಜಗದ ಆಗುಹೋಗುಗಳನ್ನು ವೀಕ್ಷಿಸುತ್ತಾ, ನಡೆದಾಡುವ ಕಾಲುಗಳ ವೇಗವನ್ನು ಕುಗ್ಗಿಸಿಕೊಳ್ಳದೆ, ಒಟ್ಟಾರೆಯಾಗಿ ಇಂದಿಗೂ ಕಾಯಕದ ಕಾರ್ಯ ಮಾಡುತ್ತಿರುವ ಈ ದೇವರಲ್ಲಿ ಅಡಗಿರುವ ಶಕ್ತಿಯಾದರೂ ಯಾವುದೆಂದು ತಿಳಿಯದಾಗಿದೆ. ಈ ಎಲ್ಲವನ್ನೂ ಗಮನಿಸುವ ಲಕ್ಷಾಂತರ ಭಕ್ತರು ಜಗದ ಅಚ್ಚರಿಗಳಲ್ಲಿ ಇದೂ ಒಂದು ಎಂದು ಭಾವಿಸಿ ಸಂಭ್ರಮಿಸುವ ಪರಿ ಅನುಪಮವಾದುದು.

ತುಮಕೂರು ಜಿಲ್ಲೆ ಶೈಕ್ಷಣಿಕ ಜಿಲ್ಲೆ ಎಂದೇ ಖ್ಯಾತಿಗಳಿಸಲು ಮೂಲ ಕಾರಣ ಜಿಲ್ಲೆಯಾದ್ಯಂತ ತೆಂಗಿನ ಬೇರುಗಳಂತೆ ಹರಡಿರುವ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಶಾಲಾ, ಕಾಲೇಜುಗಳು ಹಾಗೂ ಇದೇ ಶಿಕ್ಷಣ ಸಂಸ್ಥೆಗಳಲ್ಲಿ ದೊರೆಯುತ್ತಿರುವ ಗುಣಮಟ್ಟದ ಶಿಕ್ಷಣ.

ಗ್ರಾಮೀಣ ಭಾಗದ ಹೆಣ್ಣುಮಕ್ಕಳು ಸುಶಿಕ್ಷಿತರಾಗ ಬೇಕೆಂಬ ಉದ್ದೇಶದಿಂದ ಹಾಗು ಯಾರೂ ಶಿಕ್ಷಣದಿಂದ ವಂಚಿತರಾಗ ಬಾರದೆಂಬ ಮಹದಾಸೆಯನ್ನಿಟ್ಟುಕೊಂಡು ಗ್ರಾಮೀಣ ಮಟ್ಟದಲ್ಲಿ ಹಳ್ಳಿ ಹಳ್ಳಿಗಳಲ್ಲಿಯೂ ವಿದ್ಯಾಸಂಸ್ಥೆಯ ಅಡಿಯಲ್ಲಿ ಶಾಲಾ ಕಾಲೇಜುಗಳನ್ನು ತೆರೆದು ಸೇವೆ ಮಾಡಲು ಮುಂದಾದ ಶ್ರೀಗಳು ಇಂದು ತುಮಕೂರು ಜಿಲ್ಲೆ ಶೈಕ್ಷಣಿಕ ಜಿಲ್ಲೆ ಎಂದು ಪ್ರಸಿದ್ಧಿ ಪಡೆಯಲು ಕಾರಣೀಭೂತರಾಗಿದ್ದಾರೆ.

ತುಮಕೂರು ಜಿಲ್ಲೆ ಮುಂದುವರೆಯಲು ಹೆಚ್‌ಎಂಟಿ ಕಾರ್ಖಾನೆ ಸ್ಥಾಪನೆಯಲ್ಲಿ ಶ್ರೀಗಳ ಶ್ರಮ ಅಪಾರವಾದುದು. ಈ ಕಾರ್ಖಾನೆಯಿಂದ ಸಾವಿರಾರು ನಿರುದ್ಯೋಗಿಗಳು ಉದ್ಯೋಗ ಪಡೆದುಕೊಂಡರು. ಹೆಚ್‌ಎಂಟಿ ಕಾರ್ಖಾನೆಯ ಸ್ಥಾಪನೆಯಲ್ಲಿ ಶ್ರೀಗಳ ಕೊಡುಗೆ ಅಪಾರವಾದುದು.

ಅನ್ನದಾನ ಮಹಾದಾನ ಎಂಬಂತೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಪ್ರತಿನಿತ್ಯ ಬಂದ ಭಕ್ತಾದಿಗಳಿಗೆ ದಾಸೋಹ ವ್ಯವಸ್ಥೆಯನ್ನು ಕಲ್ಪಿಸಿದ ಶ್ರೀಗಳು ಅಂದು ಪ್ರಾರಂಭಿಸಿದ ಅಗ್ನಿ

ಇಂದಿಗೂ ಆರಿಲ್ಲ. ಪೂಜ್ಯ ಸ್ವಾಮೀಜಿಗಳು ಅಂದು ಕಟ್ಟಿಗೆ ಸಿಗಿದು ಒಲೆ ಉರಿಸುತ್ತಾ, ತಾನೇ ಕೈಯಾರೆ ಮುದ್ದೆ ಕಟ್ಟಿ, ಅನ್ನಸಾರು ಮಾಡಿ ತಮ್ಮ ಕೈಯಿಂದಲೇ ಬಡಿಸಲು ಆರಂಭಿಸಿದ ಅನ್ನದಾನ ವ್ಯವಸ್ಥೆ ಇಂದಿಗೂ ನಿಂತಿಲ್ಲ.

ಶ್ರೀ ಮಠದಲ್ಲಿ ನೆಲೆಸಿರುವ ಸುಮಾರು ಹತ್ತು ಸಾವಿರ ವಿದ್ಯಾರ್ಥಿಗಳಿಗೆ ಉಚಿತವಾಗಿ ಹೊಟ್ಟೆ ತುಂಬಾ ಪ್ರಸಾದ ನೀಡುತ್ತಾ ಉಚಿತವಾಗಿಯೇ ವಿದ್ಯಾಭ್ಯಾಸವನ್ನೂ ನೀಡಿ, ಶ್ರೀಮಠದ ತಪ್ಪಲಿನಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ದರ್ಶನಕ್ಕೆ ಬರುವ ಭಕ್ತಾದಿಗಳಿಗೆ, ಶ್ರೀಮಠಕ್ಕೆ ತೆರಳುವ ಪ್ರತಿಯೊಬ್ಬರಿಗೂ ಉಚಿತವಾಗಿಯೇ ದಾಸೋಹ ವ್ಯವಸ್ಥೆಯನ್ನು ಕಲ್ಪಿಸಿದ್ದಾರೆ.

ಶ್ರೀ ಮಠಕ್ಕೆ ಯಾರೇ ಬರಲಿ ಬಡವ-ಬಲ್ಲಿದ, ಸೇವಕ-ಅಧಿಕಾರಿ, ಸಾಮಾನ್ಯ-ಮುಖಂಡ, ಕಿರಿಯ-ಹಿರಿಯ, ಎಂಬ ಎಲ್ಲರನ್ನೂ ಸಮಾನರಂತೆ ಕಾಣುತ್ತಾ, ಕ್ಷೇಮವಾಗಿದ್ದೀರೇ, ಪ್ರಸಾದ ಸ್ವೀಕರಿಸಿಯೇ ಹೋಗಿ ಎಂದು ಮರೆಯದೆ ವಿಚಾರಿಸುವ ಪರಿ ಇಂದಿಗೂ ಪೂಜ್ಯ ಸ್ವಾಮೀಜಿಗಳ ಮೇಲಿನ ಭಕ್ತಿ ಭಾವವನ್ನು ಇಮ್ಮಡಿಗೊಳಿಸುತ್ತದೆ.

ಜಾತಿ ಮತ ಪಂಥಗಳ ಬೇಧವಿಲ್ಲದೆ ಪ್ರಪಂಚದಲ್ಲಿ ಬದುಕುವುದು ಕಷ್ಟ. ಆದರೆ ಮನಸ್ಸಿದ್ದರೆ ಯಾವ ವಿಷಯಗಳೂ ಕಷ್ಟಕರವಲ್ಲ ಎಂಬುದನ್ನು ಎತ್ತಿ ಹಿಡಿದಿರುವ ಶ್ರೀಗಳು ಸಕಲರೂ ನನ್ನವರೆಂಬ ಭಾವನೆಯಿಂದ ಹಿಂದೂ, ಮುಸ್ಲಿಂ, ಕ್ರೈಸ್ತ, ಜೈನ ಎಲ್ಲಾ ಜಾತಿಯ ವಿದ್ಯಾರ್ಥಿಗಳಿಗೂ ಶ್ರೀಮಠದಲ್ಲಿ ಉಚಿತವಾಗಿ ಅನ್ನದಾಸೋಹವನ್ನು ನೀಡುತ್ತಿದ್ದಾರೆ. ಎಲ್ಲರೂ ಸಮಾನರು. ಯಾರಲ್ಲಿಯೂ ಬೇಧ ಭಾವವಿಲ್ಲ ಎಂದು ಜಗತ್ತಿಗೆ ಮನವರಿಕೆ ಮಾಡಿಕೊಟ್ಟು ಹೀಗೂ ಬದುಕಬಹುದೆಂದು ತೋರಿಸಿ ಸಮಾನತೆಯ ಜ್ಯೋತಿಯನ್ನು ಹಚ್ಚುತ್ತಿದ್ದಾರೆ.

**ದಿನದ ಚಟುವಟಿಕೆಗಳು** : ಪ್ರತಿದಿನ ೨ ಗಂಟೆಗೆ ಎದ್ದು ಹಲವು ಕೃತಿಗಳನ್ನು ಅಲ್ಪ ಸಮಯದಲ್ಲಿಯೇ ಓದುತ್ತಾರೆ. ನಂತರದಲ್ಲಿ ಸತತವಾಗಿ ಸುಮಾರು ೨-೩ ಗಂಟೆ ಸಮಯದಲ್ಲಿ ಶಿವಪೂಜೆ ಮಾಡುತ್ತಾರೆ. ೭ ಗಂಟೆಯ ನಂತರದಲ್ಲಿ ಲಘು ಉಪಾಹಾರವನ್ನು ಮುಗಿಸಿ ಶ್ರೀಮಠದಲ್ಲಿ ನಡೆಯುತ್ತಿರುವ ಕೆಲಸ ಕಾರ್ಯಗಳತ್ತ ಗಮನ ಹರಿಸುತ್ತಾರೆ. ಮಧ್ಯಾಹ್ನದ ಸಮಯದಲ್ಲಿ ಧ್ಯಾನ ಮುಗಿಸಿಕೊಂಡು ರಾತ್ರಿ ಹತ್ತು ಗಂಟೆಯವರೆಗೂ ಲೋಕ ಕಲ್ಯಾಣಕ್ಕಾಗಿಯೇ ದುಡಿಯುತ್ತಾ ಶ್ರೀಮಠದಲ್ಲಿ ನೆಲೆಸಿರುವ ಮಕ್ಕಳಿಗೆ ಯಾವುದೇ ರೀತಿಯ ತೊಂದರೆಗಳಾಗದ ರೀತಿಯಲ್ಲಿ ವ್ಯವಸ್ಥೆ ಕಲ್ಪಿಸುತ್ತಿರುತ್ತಾರೆ. ರಾತ್ರಿ ಹತ್ತು ಗಂಟೆಯ ನಂತರ ಪ್ರಸಾದ ಸ್ವೀಕರಿಸಿ ಹನ್ನೊಂದು ಗಂಟೆಗೆ ನಿದ್ರೆಗೆ ಜಾರುತ್ತಾರೆ.

ಜಗತ್ತಿನ ಸೂರ್ಯ ಉದಯಿಸಿದರೆ ಎಲ್ಲೆಡೆ ಬೆಳಕು ಹರಿಯುತ್ತದೆ. ಅದೇ ಶ್ರೀಮಠದಲ್ಲಿ ಶ್ರೀಗಳು ಸುಳಿದಾಡಿದರೆ ಭಕ್ತರ ಮಕ್ಕಳ ಮನದೊಳಗೆ ಒಂದು ವಿಭಿನ್ನ ಆಶಾಕಿರಣ ಮೂಡಿದಂತಾಗುತ್ತದೆ. ಎಂತಹವರಿಗಾದರೂ ಪೂಜ್ಯರನ್ನು ಕಂಡರೆ ಭಕ್ತಿ ಉಕ್ಕಿ ಬರುತ್ತದೆ. ಇವರ ಕುಸುಮ, ಕೋಮಲ ದಿವ್ಯಪಾದಗಳನ್ನು ಸ್ಪರ್ಶಿಸಿದವರೆಲ್ಲರಿಗೂ ಏನೋ ಒಂದು ರೀತಿಯ ಆನಂದ ದೊರೆಯುತ್ತದೆ. ನಮ್ಮ ಮಕ್ಕಳಿಗೆ ತಂದೆ ತಾಯಿ ನಾವಾದರೆ, ಪೂಜ್ಯರು ಜಗದ ಎಲ್ಲರ ಗುರುಗಳಾಗಿ ತಂದೆ-ತಾಯಿಯಾಗಿ ಮಾರ್ಗದರ್ಶಕರಾಗಿದ್ದಾರೆ.

ಜಗತ್ತಿನಲ್ಲಿ ಕಣ್ಣು, ಕಿವಿ, ಮಾತು ಬಾರದ ಅದೆಷ್ಟೋ ಜೀವಗಳು ಅಜ್ಞಾನದ ಅಂಧಕಾರದಲ್ಲಿರುತ್ತವೆ. ಆದರೆ ಇಂತಹ ಮಕ್ಕಳಿಗೂ ಅನ್ಯಾಯವಾಗಬಾರದೆಂಬ ಉದ್ದೇಶದಿಂದ ವಿಕಲಚೇತನ ಮಕ್ಕಳ ಶಾಲೆಯೊಂದನ್ನು ತೆರೆದು ಇಲ್ಲಿಯೂ ನೂರಾರು ಅನಾಥ ಮಕ್ಕಳಿಗೆ ಉಚಿತವಾಗಿ ವಸತಿ, ವಿದ್ಯಾಭ್ಯಾಸ, ದಾಸೋಹ ವ್ಯವಸ್ಥೆಯನ್ನು ಕಲ್ಪಿಸಿ ಕೊಡುತ್ತಿದ್ದಾರೆ.

೧೯೬೨ ರಲ್ಲಿ ಶ್ರೀಗಳು ಪ್ರಾರಂಭಿಸಿದ ತಾಂತ್ರಿಕ ಮಹಾವಿದ್ಯಾಲಯ ಇಂದು ಭಾರತದಲ್ಲೇ ಎರಡನೇ ಅತೀ ದೊಡ್ಡ ಕಾಲೇಜಾಗಿ ಮಾರ್ಪಟ್ಟಿದೆ. ಇದೇ ಕಾಲೇಜಿನಲ್ಲಿ ಇಂದು ದೇಶದ ಮೂಲೆ ಮೂಲೆಗಳಿಂದ ವಿದ್ಯಾರ್ಥಿಗಳು ಇಂಜಿನಿಯರಿಂಗ್ ವಿದ್ಯಾಭ್ಯಾಸವನ್ನರಸಿ ಬರುತ್ತಿದ್ದಾರೆ. ಹಾಗೆಯೇ ತುಮಕೂರು ಜಿಲ್ಲೆಯ ಹಲವೆಡೆಗಳಲ್ಲಿ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ವತಿಯಿಂದ ಶಾಲಾ ಕಾಲೇಜುಗಳು ಬಡಮಕ್ಕಳಿಗೆ ಉಚಿತವಾಗಿಯೇ ವಿದ್ಯಾಭ್ಯಾಸ ನೀಡುತ್ತಿದ್ದಾರೆ. ಕರ್ನಾಟಕದ ಇನ್ನೂ ಹಲವಾರು ಜಿಲ್ಲೆಗಳಲ್ಲಿಯೂ ಸಂಸ್ಥೆಯ ಶಾಲಾ ಕಾಲೇಜುಗಳಲ್ಲಿ ಬಡ ವಿದ್ಯಾರ್ಥಿಗಳಿಗೆ ಉಚಿತ ವಾಗಿಯೇ ಶಿಕ್ಷಣ ದೊರೆಯುತ್ತಿದೆ.

ಶ್ರೀಗಳು ೧೦೮ ವರ್ಷಗಳ ಕಾಲ ಲೋಕ ಸೇವೆಯಲ್ಲಿ ತೊಡಗಿಸಿಕೊಂಡಿರುವುದಕ್ಕೆ ಇವರು ಹೊಂದಿರುವ ಅಪಾರ ಭಕ್ತರ ಪ್ರಾರ್ಥನೆ ಕಾರಣವಾಗಿದೆ. ಇನ್ನೂ ತುಮಕೂರಿನ ಜನತೆ ಇಂದು ಶ್ರೀಗಳ ಹುಟ್ಟುಹಬ್ಬವನ್ನು ಮನೆ ಹಬ್ಬದಂತೆ ಆಚರಿಸುತ್ತಾರೆ. ಶ್ರೀಗಳು ಮಾತ್ರ ನನಗೆ ಯಾವ ಸನ್ಮಾನ, ಯಾವ ಪ್ರಶಸ್ತಿಗಳೂ ಬೇಡ ಎಂದರೂ ಭಕ್ತರು ಬಲವಂತ ವಾಗಿ ಗುರುವಂದನಾ ಕಾರ್ಯಕ್ರಮಗಳನ್ನು ಆಯೋಜಿಸಿ ಏಪ್ರಿಲ್ ೧ರಂದು ತುಮಕೂರು ಜಿಲ್ಲೆಯಾದ್ಯಂತ ಹಬ್ಬದ ವಾತಾವರಣವನ್ನು ಸೃಷ್ಟಿಸುತ್ತಾರೆ.

ಇನ್ನು ತುಮಕೂರು ನಗರದಲ್ಲಿ ಸುಮಾರು ಒಂದು ತಿಂಗಳಿನಿಂದಲೂ ಶ್ರೀಗಳ ಹುಟ್ಟುಹಬ್ಬವನ್ನು ಆಚರಿಸಲು ಕಾತುರದಿಂದ ಕಾಯುತ್ತಿತ್ತು, ಆ ಸುದಿನ ಇಂದು ಕೂಡಿ ಬಂದಿದೆ. ಪೂಜ್ಯರ ಆಶೀರ್ವಾದ ಇನ್ನೂ ಹಲವಾರು ವಸಂತಗಳ ಕಾಲ ನಮ್ಮನ್ನೆಲ್ಲರನ್ನೂ ರಕ್ಷಿಸಲೆಂದು ಸಮಸ್ತ ಕರ್ನಾಟಕ ಜನರ ಆಶಯವಾಗಿದೆ.

*(ಕೃಪೆ : ಟೈಮ್ಸ್ ಆಫ್ ಕರ್ನಾಟಕ)*





# ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಗೌರವದ ಮತ್ತೊಂದು 'ಗರಿ'
## (The Best Hindu of the Year 2014)

- ಪ್ರೊ. ಎಂ.ಬಿ. ಸದಾಶಿವಯ್ಯ*

ನಡೆದಾಡುವ ದೇವರಿಗೆ ಈಗ ೧೦೮ ವರುಷ. ಪರಮಾಶ್ಚರ್ಯ! ಪರಮಾದ್ಭುತ! ಹಿಂದೆ ಋಷಿ ಪುಂಗವರು ೧೫೦/೧೬೦ ವರುಷಗಳು, ಹಾಗೂ ಟಿಬೆಟ್ ಪ್ರಾಂತ್ಯದ ಲಾಮಾಗಳು ೨೦೦/೨೫೦ ವರುಷಗಳು ಜೀವಿಸಿದ್ದು ನಾವು ಕೇಳಿದ್ದೇವೆ ಮತ್ತು ಹಲವು ಪುಸ್ತಕಗಳಲ್ಲಿ ಓದಿದ್ದೇವೆ. ಆದರೆ ನಮ್ಮ ಮಧ್ಯೆ ನಮ್ಮ ಕಣ್ಮುಂದೆ ಒಬ್ಬ ಅಪರೂಪದ ಯತೀಂದ್ರಿಯರು, ಈ ಇಳಿ ವಯಸ್ಸಿನಲ್ಲಿ, ದಿನಂಪ್ರತಿ ೧೮ ಗಂಟೆ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡು 'ಕಾಯಕ ಮತ್ತು ದಾಸೋಹ'ವೆಂಬ ಎರಡು ಶರಣ ತತ್ವಗಳಿಗೆ ಪ್ರಾಯೋಗಿಕ ಪರಿಕಲ್ಪನೆ ಕೊಡುತ್ತಾ ಸಾಗುತ್ತಿರುವುದು, ಈ ಯುಗಕ್ಕೆ ಈ ಯುಗಪುರುಷರು ಕೊಡುತ್ತಿರುವ ಸ್ಫೂರ್ತಿ! ಈ ಅಕಳಂಕ ಗುರುವಿನ ವ್ಯಕ್ತಿತ್ವ ಅನನ್ಯ, ಅವರ ಸಾಧನೆ ಅನೂಹ್ಯ!

ಇತ್ತೀಚೆಗಷ್ಟೆ ಭಾರತದ ಘನಸರ್ಕಾರ ಪರಮಪೂಜ್ಯರಿಗೆ 'ಪದ್ಮಭೂಷಣ' ಪುರಸ್ಕಾರವನ್ನು ಭಕ್ತಿಯಿಂದ ನೀಡಿ ಭಾಗ್ಯಶಾಲಿಯಾಯಿತು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳಿಗೆ 'ಭಾರತರತ್ನ' ನೀಡಿ ಗೌರವಿಸಬೇಕು. ಇದು ಕೋಟ್ಯಾಂತರ ಜನರ ಮನದಾಳದ ಮಾತು ಮತ್ತು ಬೇಡಿಕೆ. Swamiji is above any awards. ಅವರದು ನಿಷ್ಕಾಮ ಸೇವೆ.

ಪದ್ಮಭೂಷಣ ಪ್ರಶಸ್ತಿ ಪ್ರದಾನಕ್ಕಿಂತಲೂ ಸ್ವಲ್ಪ ಮುನ್ನ ಪರಮಪೂಜ್ಯರ ಕೀರ್ತಿ ಮುಕುಟಕ್ಕೆ 'The Best Hindu of the year-2014' ಎಂಬ ಮತ್ತೊಂದು ಗರಿ, ಹೆಚ್ಚು ಸದ್ದುಮಾಡದೆ ಬಂದು ಸೇರಿರುವುದು ಒಂದು ವಿಶೇಷ ಮತ್ತು ಈ ಲೇಖನದ ಪ್ರಸ್ತಾವನೆ.



ಹಿಂದುಇಸಮ್ ಟುಡೇ ಪತ್ರಿಕೆಯ ಪ್ರಧಾನ ಸಂಪಾದಕರಾದ ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳು ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಗೌರವ ಸಮರ್ಪಿಸುತ್ತಿರುವುದು.

* ಸಿದ್ಧಗಂಗಾ ಕಾಲೇಜು, ತುಮಕೂರು.



ಪರಮಪೂಜ್ಯ ಶ್ರೀ ಶ್ರೀಗಳವರು ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮೀಗಳವರನ್ನು ಗೌರವಿಸುತ್ತಿರುವುದು.



ಅಮೇರಿಕಾದ ಸಂತರಾದ ಸಾಧಕ ಶ್ರೀ ಯೋಗೀನಾಥ ಸ್ವಾಮಿಗಳವರನ್ನು ಪರಮಪೂಜ್ಯ ಶ್ರೀಗಳವರು ಆಶೀರ್ವದಿಸಿದರು.



ಹಿಂದುಇಸಮ್ ಟುಡೇ ಪತ್ರಿಕೆಯ ವರದಿಗಾರರಾದ ಶ್ರೀಮತಿ ಚೂಡಿ ಶಿವರಾಮ್ ಅವರನ್ನು ಪೂಜ್ಯ ಶ್ರೀಗಳವರು ಆಶೀರ್ವದಿಸುತ್ತಿರುವುದು.

೮-೧೧-೨೦೧೪ ರ ಬೆಳಿಗ್ಗೆ ಸುಮಾರು ೧೦.೩೦ರ ಸಮಯ(ಮೊದಲೇ ನಮಗೆ ತಿಳಿಸಿದ ಹಾಗೆ) ಸುಮಾರು ೭ ಅಡಿ ಎತ್ತರ, ಬಿಳಿಯ ಬಣ್ಣ, ಬಿಳಿಯ ಉದ್ದನೆಯ ಗಡ್ಡ, ಕಾಷಾಯಧಾರಿ, ಉದ್ದನೆಯ ದಪ್ಪದಪದ ರುದ್ರಾಕ್ಷಿಮಾಲೆ ಧಾರಣೆ, ಹೊಳಪಿನ ಕಣ್ಣುಗಳು, ಪ್ರಶಾಂತ ಮತ್ತು ಪ್ರಸನ್ನ ವದನೆಯ ವಿದೇಶಿ ಸ್ವಾಮಿಗಳು ಶ್ರೀಕ್ಷೇತ್ರದಲ್ಲಿ ಕಾರನ್ನಿಳಿದು ಬಂದ ಕೂಡಲೇ, ಅವರನ್ನು ಕುಶಲ ಪ್ರಶ್ನೆ ಮಾಡಿ ಸ್ವಾಗತಿಸಲು ಹೋದ ನಮಗೆ, ಅವರ ಪ್ರತಿ ನಮಸ್ಕಾರ 'ಓಂ ನಮಃಶ್ಶಿವಾಯ' ಬಂದ ಸ್ವಾಮಿಗಳು ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳು. ಅವರ ಜೊತೆಗೂಡಿ ಬಂದವರು ಸಾಧಕ ಯೋಗಿನಾಥ ಹವಾಯಿ, ಸನ್ಯಾಸಿ ಚರಮೂರ್ತಿ ಶ್ರೀ ಯೋಗೇಂದ್ರಪುರಿ ಸ್ವಾಮೀಜಿ, ಕೈಲಾಸಾಶ್ರಮ ಮಹಾಸಂಸ್ಥಾನ, ರಾಜರಾಜೇಶ್ವರಿನಗರ, ಬೆಂಗಳೂರು, ಶ್ರೀಮತಿ ಮತ್ತು ಶ್ರೀ ಸೀತಾರಾಮನ್ ಹಾಗೂ 'Hinduism Today' ವೃತ್ತ ಪತ್ರಿಕೆಯ ಪ್ರಮುಖ ಕರೆಸ್ಪಾಂಡೆಂಟ್ ಶ್ರೀಮತಿ ಚೂಡಿ ಶಿವರಾಮ್ ಮತ್ತು ಇತರ ಗಣ್ಯರು.

ಪರಮಾಚಾರ್ಯ ಶ್ರೀ ಸದಾಶಿವನಾಥಸ್ವಾಮಿಗಳು, ಅಮೆರಿಕಾ ದೇಶದ ಹವಾಯಿ ಪ್ರಾಂತ್ಯದ ಕಪ್ಪಾ ಎಂಬ ಸ್ಥಳದಲ್ಲಿ ೪೦೦ ಎಕರೆ ಪ್ರದೇಶದಲ್ಲಿ ಸ್ಥಾಪಿಸಿರುವ ಹಿಂದೂ ಸಮಾಜದಿಂದ ಬಂದವರು. ಸುಮಾರು ೪೦ ಜನ ಸ್ವಾಮಿಗಳು (ಹಲವರು ಭಾರತ ಮೂಲದವರು ಮತ್ತು ಹಲವರು Converted to Hinduism) ಈ ಕ್ಷೇತ್ರವನ್ನು ನಿರ್ವಹಿಸುತ್ತಿದ್ದಾರೆ. ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳು Hinduism Today ವೃತ್ತ ಪತ್ರಿಕೆಯ Editor-in-Chief ಸಹಾ ಆಗಿರುತ್ತಾರೆ.

ಇವರು ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಬಂದ ಉದ್ದೇಶ ೨೦೧೪ನೇ ಸಾಲಿನ 'Hindu of the year' ಆಗಿ ಆಯ್ಕೆಯಾಗಿರುವ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳಿಗೆ, ಈ ಪುರಸ್ಕಾರವನ್ನು ದಯಪಾಲಿಸಿ ಧನ್ಯರಾಗಲು (ಏಪ್ರಿಲ್, ಮೇಲ್ ಜೂನ್ ೨೦೧೩ ಸಂಚಿಕೆ 'Hinduism Today' ನಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರ, ಶ್ರೀ ಶ್ರೀಗಳ ಸಾಧನೆ, ಶ್ರೀ ಸಿದ್ಧಲಿಂಗಸ್ವಾಮಿಗಳ ಸೇವಾಪಥದ ಬಗ್ಗೆ ವಿವರವಾದ ಲೇಖನವನ್ನು ಭಾವಚಿತ್ರಗಳ ಸಮೇತ ಶ್ರೀಮತಿ ಚೂಡಿ ಶಿವರಾಂ ಮತ್ತು ಶ್ರೀ ಸ್ಕಂದ ಶಿವರಾಂ ಅವರು ಬರೆದಿರುತ್ತಾರೆ).

ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳು, ಅವರ ಸಂಗಡಿಗರೊಂದಿಗೆ, ಪರಮಪೂಜ್ಯರ ಕಛೇರಿಯಲ್ಲಿ ಶ್ರೀ ಶ್ರೀಗಳೊಡನೆ ಉಭಯಕುಶಲೋಪರಿ ನಡೆಸಿ, ತಾವುಗಳು ಇಲ್ಲಿಗೆ ಬಂದ ಘನ ಉದ್ದೇಶವನ್ನು ತಿಳಿಸಿ ಶ್ರೀಗಳಿಗೆ ಫಲಪುಷ್ಪಗಳನ್ನು ನೀಡಿ 'The Best Hindu of the year-2014 ಕೀರ್ತಿಯನ್ನೊತ್ತ ಫಲಕವನ್ನು ನೀಡಿ ಧನ್ಯರಾದರು.








ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರೊಂದಿಗೆ ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳವರು ಸಮಾಲೋಚಿಸುತ್ತಿರುವುದು.



ಶ್ರೀಮಠದ ದರ್ಶನ ಮಂಟಪದಲ್ಲಿ ಪರಮಾಚಾರ್ಯ ಶ್ರೀ ಸದಾಶಿವನಾಥ ಸ್ವಾಮಿಗಳು ಹಾಗೂ ಶ್ರೀ ಯೋಗೀನಾಥ ಸ್ವಾಮಿಗಳು



ಹಿಂದುಇಸಮ್ ಟುಡೇ ಪತ್ರಿಕೆಯ ಬಳಗದವರೊಂದಿಗೆ ಸಿದ್ಧಗಂಗಾ ಪತ್ರಿಕಾ ಬಳಗ.

ಹವಾಯಿ ತಮ್ಮ ಆಶ್ರಮದಲ್ಲಿ ಬೆಳೆದ ರುದ್ರಾಕ್ಷಿ ಮತ್ತು ತಮ್ಮ ದೇಶದಿಂದ ತಂದ ಚಾಕೋಲೇಟ್‌ಗಳನ್ನು ಗುರುಗಳಿಗೆ ಕಾಣಿಕೆಯಾಗಿ ನೀಡಿದರು. ಆ ಕೆಲವು ಕ್ಷಣಗಳು ಭಕ್ತಿ ಮತ್ತು ಧನ್ಯತೆಗೆ ಸಾಕ್ಷಿಯಾಗಿದ್ದವು.

ಪರಮ ಶ್ರೀಗಳವರು 'The best Hindu of the year 2014' ಮಾತ್ರವಲ್ಲ, ಅವರು 'The best Hindu for Ever' ಆಗಿರುತ್ತಾರೆ ಎಂದರೆ ತಪ್ಪಾಗಲಾರದು. Hindu ಅಥವಾ Hinduism ಪದವನ್ನು ವಿಸ್ತಾರವಾದ ಅರ್ಥದಲ್ಲಿ ಬಳಸಿಕೊಳ್ಳಬೇಕೇ ವಿನಹ ಸಂಕುಚಿತವಾಗಿ ಒಂದು ದೇಶ, ಒಂದು ಜಾತಿ, ಒಂದು ಧರ್ಮಕ್ಕೆ ಸೀಮಿತಗೊಳಿಸಿಕೊಳ್ಳ ಬಾರದು. Hinduism is a global religion. It is universal in character which is referred to as Sanatana Dharma. ಪರಮಪೂಜ್ಯರು 'The holiest of the holy' ಶ್ರೇಷ್ಠರಲ್ಲಿ ಪರಮಶ್ರೇಷ್ಠರು. The great men of Hindu religion did not profess to uplift or save others by their teachings. They made themselves pure and their precept and practice made for spiritual education of those who came in contact with them'.

ಪ್ರೀತಿ, ಪ್ರೇಮ, ಅನುಕಂಪ, ಮಾನವೀಯತೆ, ಸದಾ ಚಾಚಿದ ಸಹಾಯ ಹಸ್ತ ಮತ್ತು ಜಾತಿ, ಧರ್ಮ, ದೇಶ. ಪ್ರಾಂತ್ಯಗಳೆಂಬ ಸಂಕುಚಿತಗಳನ್ನು ಮೆಟ್ಟಿ, ಎಲ್ಲರನ್ನು ತಮ್ಮ ತೆಕ್ಕೆಯೊಳಗೆ ಆಶ್ರಯ ಕೊಟ್ಟಿರುವ ಮಹಾಮಹಿಮರು. ಶ್ರೇಷ್ಠರಲ್ಲದೆ ಮತ್ತಾರು? He is a transcended Soul.

ಸುಮಾರು ಒಂಭತ್ತು ದಶಕಗಳು ಲೋಕಕಲ್ಯಾಣಕ್ಕಾಗಿ ಬಡವರ, ದೀನದಲಿತರ ಏಳ್ಗೆಗಾಗಿ ಪರಮಪೂಜ್ಯರ ಅವಿರತ ನಿಸ್ವಾರ್ಥ ಸೇವೆಯನ್ನು ಮನಗಂಡು, ದೂರದ ಅಮೆರಿಕಾ ದೇಶದಿಂದ ಬಂದು 'The best Hindu of the year 2014' ಗೌರವವನ್ನು ಸಮರ್ಪಿಸಿರುವುದು ಸಮಂಜಸ.

ಹವಾಯಿ ಪ್ರಾಂತ್ಯದ ಪರಮಾಚಾರ್ಯ ಸದಾಶಿವನಾಥಸ್ವಾಮಿಗಳು ಪುರಸ್ಕಾರವನ್ನು ನೀಡಿ, ಸಂತಸಗೊಂಡು, ಶ್ರೀಕ್ಷೇತ್ರದ ಶಾಂತಿ ಮತ್ತು ನೆಮ್ಮದಿಯ ವಾತಾವರಣವನ್ನು ಕಂಡು 'Silence speaks here' ಎಂದು ನುಡಿದರು. ಹಾಗೆಯೇ ಸಿದ್ಧಗಂಗಾ ಗ್ರಂಥಾಲಯ ಮತ್ತು ವಸ್ತುಸಂಗ್ರಹಾಲಯ, ಬೆಟ್ಟದ ಮೇಲಿನ ದೇವಸ್ಥಾನ, ಹಳೆಯ ಮಠ ಮುಂತಾದುವುಗಳಲ್ಲಿ ಸುತ್ತಾಡಿ, 'I feel line staying here in this serene place for some days' ಎಂದು ತಮ್ಮ ಅಭೀಷ್ಟವನ್ನು ವ್ಯಕ್ತಪಡಿಸಿದರು.

ನಂತರ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳೊಡನೆ ಹಲವು ನಿಮಿಷಗಳು ಕಳೆದು, ಪ್ರಸಾದ ಸ್ವೀಕರಿಸಿ ಸಂತಸ, ಸಂತೃಪ್ತಿಯ ಮೊಗದಿಂದ ತಮ್ಮ ಗಮ್ಯದ ಕಡೆಗೆ ಮುಂದೆ ಸಾಗಿದರು. ❑

# ನನ್ನ ಜೀವನದ ಕೆಲವು ನೆನಪುಗಳು

– ಸಾಹಿತ್ಯರತ್ನ ಅನ್ನದಾನಯ್ಯ ಪುರಾಣಿಕ *

ನನ್ನ ಜೀವನ ಹೋರಾಟದ ಕಥೆ ಇದು. ನನ್ನ ಜೀವನದಲ್ಲಿ ನಾನು ಕಂಡುಂಡ ಏಳುಬೀಳುಗಳು, ಸಾಧನೆ ಸಿದ್ಧಿಗಳು ಹಾಗೂ ಸಿಹಿಕಹಿ ನೆನಪುಗಳು ಇಂದಿನ ಯುವಕರಿಗೆ ದಾರಿದೀಪಗಳಾಗಬಹುದು. ಇವುಗಳ ಸಂಕ್ಷಿಪ್ತ ವಿವರಣೆ ಕೆಳಗಿನಂತಿದೆ.

ಇಂದಿನ ಕೊಪ್ಪಳ ಜಿಲ್ಲೆಗೆ ಸೇರಿದ ಕುತನೂರು. ಶಾಕ್ತ ಪಂಥದ ಸುಪ್ರಸಿದ್ಧ ಶಕ್ತಿಪೀಠವಾಗಿ, ಶಿಕ್ಷಣಕೇಂದ್ರವಾದ ಮಹಾಗ್ರಹಾರವಾಗಿ, ಕಲೆವಾಸ್ತುಗಳನ್ನು ಕಂಡ ಸ್ಥಳವಾಗಿದೆ. ಕುತನೂರಿಗೆ ಅನತಿ ದೂರದಲ್ಲಿರುವ ದ್ಯಾಂಪುರದಲ್ಲಿ ಪಂಡಿತರತ್ನ ವರಕವಿ ಕಲ್ಲಿನಾಥಶಾಸ್ತ್ರಿಗಳು ಮತ್ತು ದಾನಮ್ಮನವರ ಎರಡನೆಯ ಮಗನಾಗಿ ೧೯೨೮ರ ಮಾರ್ಚ್ ೮ನೆಯ ತಾರೀಖು ನಾನು ಜನಿಸಿದನಂತೆ. ತನ್ನೂರಿನ ಕವಿರತ್ನ ಚೆನ್ನಕವಿಗಳು ನನ್ನಜ್ಜ; ನನ್ನ ತಂದೆ ಪಂ॥ ಕಲ್ಲಿನಾಥ ಶಾಸ್ತ್ರಿಗಳು ಪ್ರಖ್ಯಾತ ಪುರಾಣ ಪ್ರವಚನಕಾರರು, ಕವಿಗಳು ಹಾಗೂ ವೈದ್ಯಭೂಷಣರು. ನನ್ನಣ್ಣ ಡಾ. ಸಿದ್ಧಯ್ಯ ಪುರಾಣಿಕ (ಕಾವ್ಯಾನಂದ), ತಮ್ಮ ಪ್ರೊ. ಬಸವರಾಜ ಪುರಾಣಿಕ, ತಂಗಿ ಶರಣಮ್ಮ ಒಂದೇ ಮನೆತನಕ್ಕೆ ಸೇರಿದ ನಾವು ಮೂವರು ಆಡಳಿತ, ನ್ಯಾಯ, ಶಿಕ್ಷಣ ಹಾಗೂ ಸಾಹಿತ್ಯ ಸಂಸ್ಕೃತಿ ಕ್ಷೇತ್ರಗಳಲ್ಲಿ ನಮ್ಮದೇ ಸ್ಥಾನಗಳನ್ನು ಗಳಿಸಿದ್ದೇವೆ.

ನನ್ನ ಪ್ರಾಥಮಿಕ ವಿದ್ಯಾಭ್ಯಾಸ ಕುತನೂರಿನ ವಿದ್ಯಾನಂದ ಗುರುಕುಲದಲ್ಲಿ. ಮುಂದಿನ ಅಭ್ಯಾಸ ಕೊಪ್ಪಳದ ಸರ್ಕಾರಿ ಹೈಸ್ಕೂಲಿನಲ್ಲಿ ಹಾಗೂ ಕಲಬುರ್ಗಿಯ ಸರ್ಕಾರಿ ಹೈಸ್ಕೂಲಿನಲ್ಲಿ ನಡೆಯಿತು. ಕಾಲೇಜು ಶಿಕ್ಷಣ ಕರ್ನಾಟಕ ಮತ್ತು ಉಸ್ಮಾನಿಯಾ ವಿದ್ಯಾಲಯಗಳಲ್ಲಿ ನಡೆಯಿತು. ನಿರಾತಂಕವಾಗಿ ನಡೆಯಲಿಲ್ಲ. ಹೈದರಾಬಾದು ವಿಮೋಚನಾ ಆಂದೋಳನದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಕ್ಕೆ ಎರಡು ವರ್ಷಗಳ ಓದು ಹಾಳಾಯಿತು. ನಾನು ವಕೀಲಿ ವೃತ್ತಿ ಆರಂಭಿಸಿದ್ದು ೧೯೫೭ನೇ ಆಗಸ್ಟ್ ೧೪ರಂದು ಕರ್ನಾಟಕ ಹೈಕೋರ್ಟಿನಲ್ಲಿ. ೧೯೬೨ರಿಂದ ೧೯೬೯ರವರೆಗೆ ಬೆಂಗಳೂರಿನ ಸರ್ಕಾರಿ ಲಾ ಕಾಲೇಜಿನಲ್ಲಿ ನ್ಯಾಯಶಾಸ್ತ್ರದ (Jurispendence)ಅರೆಕಾಲಿಕ ಪ್ರಾಧ್ಯಾಪಕನಾಗಿ ಮತ್ತು ೧೯೬೯ರಿಂದ ೧೯೮೧ರವರೆಗೆ ಕರ್ನಾಟಕ ಹೈಕೋರ್ಟಿನಲ್ಲಿ ಸರ್ಕಾರಿ ನ್ಯಾಯವಾದಿಯಾಗಿ ಸೇವೆ ಸಲ್ಲಿಸಿದೆ. ೧೯೯೭ ರವರೆಗೆ ಸಕ್ರಿಯ ವಕೀಲಿ ವೃತ್ತಿ ಆರಂಭಿಸಿದೆ. ಈ ಮಧ್ಯೆ ಅನೇಕ ಸಂಘ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸುವ ಅವಕಾಶ ದೊರೆತಿದ್ದುದು ನನ್ನ ಪುಣ್ಯವೆಂದು ಭಾವಿಸುತ್ತೇನೆ.

### *ಹೋರಾಟಗಾರನಾಗಿ*

ನಾನು ಚಿಕ್ಕವಯಸ್ಸಿನಿಂದಲೂ ಅನ್ಯಾಯದ ವಿರುದ್ಧ ಹೋರಾಡುತ್ತಲೇ ಬಂದಿರುವೆ. ನಮ್ಮೂರಿನಲ್ಲಿ ಅನ್ಯಾಯ ನಡೆದರೆ ಅದರ ವಿರುದ್ಧ ಹೋರಾಡಿ ನ್ಯಾಯ ದೊರಕಿಸಿ ಕೊಡುತ್ತಿದ್ದೆ. ವಿದ್ಯಾನಂದ ಗುರುಕುಲದಲ್ಲಿ ಬ್ರಾಹ್ಮಣ್ಯೇತರ ವಿದ್ಯಾರ್ಥಿಗಳಿಗೆ ಆಗುತ್ತಿದ್ದ ಅನ್ಯಾಯ ಪ್ರತಿಭಟಿಸಿ ನ್ಯಾಯಕ್ಕಾಗಿ ಹೋರಾಡಿದೆ. ಕೊಪ್ಪಳ ಸರ್ಕಾರಿ ಹೈಸ್ಕೂಲಿನಲ್ಲಿ ಹಿಂದೂ ವಿದ್ಯಾರ್ಥಿಗಳಿಗೆ ಮೇಲೆ ನಡೆಯುತ್ತಲಿದ್ದ ದೌರ್ಜನ್ಯದ ವಿರುದ್ಧ ಹೋರಾಡಿ ನಿಲ್ಲಿಸಿದೆ. ಹಿಂದೂ ವಿದ್ಯಾರ್ಥಿಗಳನ್ನು ಸಂಘಟಿಸಿ ಅವರು ನಿರಾತಂಕವಾಗಿ ಓದು ಮುಂದುವರೆಸಲು ನೆರವಾದೆ. ಓರ್ವ ಶಿಕ್ಷಕರು ಒಮ್ಮೆ ಇಸ್ಲಾಂ ಧರ್ಮವೇ ಶ್ರೇಷ್ಠವೆಂದು ಹೇಳಿದಾಗ, ನಾನು ವೀರಶೈವ ಧರ್ಮವೇ ಶ್ರೇಷ್ಠವೆಂದು ವಾದಿಸಿದೆ. ತೋಟಕ್ಕೆ ವಿದ್ಯಾರ್ಥಿಗಳಿಂದ ನೀರು ಹೊರಿಸುತ್ತಿದ್ದನ್ನು ಪ್ರತಿಭಟಿಸಿ ನಿಲ್ಲಿಸಿದೆ. ಹೈಸ್ಕೂಲ್ ಹೆಡ್‌ಮಾಸ್ಟರ್ ಶ್ರೀ ಸರಫರಾಜ್ ಅಲಿ ಅವರ ಪ್ರೀತಿ-ವಿಶ್ವಾಸಕ್ಕೆ ಪಾತ್ರನಾದೆ. ಅವರು ರಾಜೀನಾಮೆ ನೀಡಿ ಹೈದರಾಬಾದಿಗೆ ಹೋದಾಗ ನಾನು ಸ್ಕೂಲು ತ್ಯಜಿಸಿ ಹೈದರಾಬಾದಿಗೆ ಹೋಗಿ ಅವರ ಹೈಸ್ಕೂಲಿನಲ್ಲಿ ಸೇರಿ ಅಭ್ಯಾಸ ಮುಂದುವರೆಸಿದೆ. ನಾನಿದ್ದ ವೀರಶೈವ ಹಾಸ್ಟೆಲಿನಲ್ಲಿ ವಿದ್ಯಾರ್ಥಿ ಸಂಘ ಸ್ಥಾಪಿಸಿ ಅದರ ಪ್ರಧಾನ ಕಾರ್ಯದರ್ಶಿಯಾಗಿ ತೊಡಗಿಸಿಕೊಂಡೆ. ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡೆ. ಅದರಲ್ಲಿ ಲೇಖನ, ಭಾಷಣ ಕಲೆ ಮತ್ತು ಆರೋಗ್ಯ ಅಭಿವೃದ್ಧಿಗಾಗಿ ಶ್ರಮಿಸಿದೆ. ೧೯೪೭ ಆಗಸ್ಟ್ ತಿಂಗಳಿನಲ್ಲಿ ಕಾಲೇಜು ಬಹಿಷ್ಕರಿಸಿ, ನಿಜಾಂ ಮತ್ತು ರಜಾಕಾರ ವಿರುದ್ಧದ ಹೋರಾಟದಲ್ಲಿ ಪ್ರತ್ಯಕ್ಷ ಭಾಗವಹಿಸಿದೆ. ಪ್ರಚಾರ ವಿಭಾಗದ ಮುಖ್ಯಸ್ಥನಾಗಿ ಭೂಗತನಾಗಿ ದಣಿವರಿಯದೆ ದುಡಿದೆ. ನಿಜಾಂ ಸೈನಿಕರು ಪೊಲೀಸರು ಮತ್ತು ರಜಾಕಾರರ ಚಲನವಲನಗಳನ್ನು ಬರೆದು ಮತ್ತು ಸುತ್ತಮುತ್ತಲಿನ ಹಳ್ಳಿಗರಲ್ಲಿ ಧೈರ್ಯ ತುಂಬಲು ಕೈಬರಹದ ಪತ್ರಿಕೆಗಳನ್ನು ಕಳಿಸಿದೆ. ಶಿಬಿರದ ಕಾರ್ಯಾಚರಣೆಯ ಯೋಜನೆಗಳನ್ನು ಸಿದ್ಧಪಡಿಸಿ ಅವು ಕಾರ್ಯಗತವಾಗುವಂತೆ ಪ್ರಯತ್ನಿಸಿದೆ. ಸುಮಾರು ೩೪ ಹಳ್ಳಿಗಳಲ್ಲಿ ವಿಮೋಚನಗೊಳಿಸಿ ಜನತಾ ಸರ್ಕಾರವನ್ನು ಸ್ಥಾಪಿಸಿದಾಗ ಗೃಹ, ರಕ್ಷಣೆ ಮತ್ತು ಸುದ್ದಿ ಪ್ರಚಾರ ಶಾಖೆಯ ಮಂತ್ರಿಯಾಗಿ ಸೇವೆ ಸಲ್ಲಿಸಿದೆ. ಅರೆಸ್ಟ್ ವಾರೆಂಟ್ ಜಾರಿಯಾಗಿ, ನಿಜಾಂ ಪೊಲೀಸರು ಮುಂಬೈ ಪೊಲೀಸರು ಮುಂಡರಗಿ ಶಿಬಿರದ ಮೇಲೆ ದಾಳಿ ಮಾಡುವ ಸುದ್ದಿ ತಿಳಿದಾಗ ಫೌಜದಾರ ಶ್ರೀ ಹೆಬ್ಬರೂರ ನೆರವಿನಿಂದ, ಶಿಬಿರವನ್ನು ತಕ್ಷಣವೇ ಖಾಲಿ ಮಾಡಿ, ಸೋಮಪ್ಪನ ನೇತೃತ್ವದಲ್ಲಿ ಗುಡ್ಡ ಪ್ರದೇಶಕ್ಕೆ ಕಳಿಸಿ, ಹೊಸೂರಿನಲ್ಲಿ ಬಂದಿಳಿದ ನೂರಾರು ಸತ್ಯಾಗ್ರಹಿಗಳ ಬಂಧನ ತಪ್ಪಿಸಲು ಕಾಲ್ನಡಿಗೆಯಲ್ಲಿ ಮಹತ್ವದ ಕಾಗದಪತ್ರಗಳೊಂದಿಗೆ ನಡೆದು ಅವರನ್ನು ತುಂಗಭದ್ರಾ ನದಿ ದಾಟಿಸಿ ಮದ್ರಾಸ್ ರಾಜ್ಯ ಪ್ರವೇಶಿಸುವಂತೆ ಮಾಡಿ ಬೆನ್ನುಹತ್ತಿ ಬಂದಿದ್ದ ಪೊಲೀಸ್ ಪಡೆ ಬರಿಗೈಯಲ್ಲಿ ವಾಪಸ್ಸು ಹೋಗುವಂತೆ ಮಾಡಿದೆ. ಅಲ್ಲಿಂದ ೨೬ ಮೈಲು ನಡೆದು ತಂಬ್ರಳ್ಳಿ ಮುಟ್ಟಿ ಅಲ್ಲಿಂದ ಗದಗಿಗೆ ಹೊರಡಲಿದ್ದ ಸತ್ಯಾಗ್ರಹಿಗಳನ್ನು ತಡೆದು ಅವರ ಬಂಧನವನ್ನು ತಪ್ಪಿಸಿದೆ. ಹೊಸಪೇಟೆಯಿಂದ ಗದಗಿನವರೆಗೆ ಗೂಡ್ಸ್ ಟ್ರೈನಿನಲ್ಲಿ ವಿರೂಪಾಕ್ಷಪ್ಪ ಮೊದಲಾದವರೊಂದಿಗೆ ಪ್ರವಾಸ ಮಾಡಿ ರಜಾಕಾರರ ಮೃತ್ಯುಪಾಶದಿಂದ ತಪ್ಪಿಸಿಕೊಂಡೆ. ಹೈದರಾಬಾದು ವಿಮೋಚನಾ ಹೋರಾಟವು ಯಶಸ್ವಿಯಾಗಿ ಗೃಹಮಂತ್ರಿ ಉಕ್ಕಿನ ಮನುಷ್ಯ ಸರದಾರ ವಲ್ಲಭಭಾಯಿ ಪಟೇಲರ ಧೀರ ವೀರ ಸೈನಿಕ ಕಾರ್ಯಾಚರಣೆಯಿಂದ ಹೈದರಾಬಾದು ಸಂಸ್ಥಾನವು ೧೯೪೮ನೆಯ ಸೆಪ್ಟೆಂಬರ್ ೧೭ ರಂದು ಭಾರತದಲ್ಲಿ ವಿಲೀನವಾಯಿತು. ಹೈದರಾಬಾದಿನ ಪ್ರಜೆಗಳಿಗೆ ಸ್ವಾತಂತ್ರ್ಯ ದೊರೆಯಿತು. ಈ ಹೋರಾಟವು ಶ್ರೀ ಅಳವಂಡಿ ಶಿವಮೂರ್ತಿ ಸ್ವಾಮಿಗಳ ಮಾರ್ಗದರ್ಶನದಲ್ಲಿ ಯಶಸ್ವಿಯಾಗಿ ನಡೆಯಿತು. ಈ ಹೋರಾಟದಲ್ಲಿ ನೂರಾರು ಜನ ತರುಣರು, ವಿದ್ಯಾರ್ಥಿಗಳು, ವಯಸ್ಕರು ಭಾಗವಹಿಸಿ ಅಸಹನೀಯವಾದ ಕಷ್ಟನಷ್ಟಗಳನ್ನು ಅನುಭವಿಸಿದರು. ಇವರೆಲ್ಲರೊಂದಿಗೆ ಬೆರೆತು ಹೋರಾಡಿ ದೇಶಸೇವೆ ಸಲ್ಲಿಸಿದ ಭಾಗ್ಯ ನನಗೆ ಲಭಿಸಿದ್ದು ನನ್ನ ಸುಕೃತ !

೧೯೫೩ರಲ್ಲಿ ಕರ್ನಾಟಕ ಏಕೀಕರಣ ಹೋರಾಟ ಉಗ್ರ ಸ್ವರೂಪ ತಾಳಿತು. ನಾನು ಏಕೀಕರಣ ದಿನಾಚರಣೆಯ ಕರೆ ನೀಡಿದೆ. ಹುಬ್ಬಳ್ಳಿಯಲ್ಲಿ ಎಂದೂ ಕಾಣದ ಬೃಹತ್ ಪ್ರದರ್ಶನ ನಡೆಸಿದೆ. ಕೆಪಿಸಿಸಿ ಸಭೆಯ ನಂತರ ಗೋಲಿಬಾರ್ ನಡೆಯಿತು. ಮಾರನೆಯ ದಿನ ನನ್ನ ದಸ್ತಗಿರಿ ಆಯಿತು. ನಾನು ಸೆರೆಮನೆಯಲ್ಲಿ ಸಂಪೂರ್ಣ ಉಪವಾಸ ಸತ್ಯಾಗ್ರಹ ಕೈಕೊಂಡೆ. ನಾನು ನಿರಪರಾಧಿ, ಅಹಿಂಸಾವಾದಿ ಹಾಗೂ ಗಾಂಧೀಜಿ ಅಪ್ಪಟ ಭಕ್ತ. ಒಂದು ವಾರದ ನಂತರ ನನ್ನ ಬಿಡುಗಡೆ ಆಯಿತು. ಸೆರೆಮನೆ ಯಲ್ಲಿದ್ದಾಗ 'ಅಖಿಲ ಕರ್ನಾಟಕ ವಿದ್ಯಾರ್ಥಿ ಪರಿಷತ್ತು' ಸ್ಥಾಪಿಸುವ ಸಂಕಲ್ಪ ಮಾಡಿದೆ. ೧೯೫೪ರಲ್ಲಿ ನಾನು ಹೈದರಾಬಾದಿಗೆ ಹೋಗಿ ಲಾ ಕಾಲೇಜ್ ಸೇರಿದೆ. ೧೯೫೪ರ ಫೆಬ್ರವರಿ ೭ರಂದು ಹೈದರಾಬಾದಿನ ನಿಜಾಂ ಕಾಲೇಜಿನಲ್ಲಿ 'ಅಖಿಲ ಕರ್ನಾಟಕ' ವಿದ್ಯಾರ್ಥಿ ಪರಿಷತ್ತಿನ ಪ್ರಥಮ ಅಧಿವೇಶನ ಜರುಗಿತು. ಕರ್ನಾಟಕದ ಎಲ್ಲಾ ಪ್ರದೇಶಗಳ ವಿದ್ಯಾರ್ಥಿ ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿದ್ದರು. ಅದು ಕರ್ನಾಟಕ ವಿದ್ಯಾರ್ಥಿಗಳ ಪ್ರಥಮ ಏಕೀಕರಣ ಅಧಿವೇಶನವಾಗಿತ್ತು. ನಾನು ಅದರ ಅಧ್ಯಕ್ಷನಾಗಿ ಅವಿರೋಧವಾಗಿ ಆಯ್ಕೆಗೊಂಡೆ. ಕರ್ನಾಟಕದಲ್ಲಿ ಸಂಚರಿಸಿ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ವಿದ್ಯಾರ್ಥಿಗಳು ಭಾಗವಹಿಸುವಂತೆ ಪ್ರಯತ್ನಿಸಿದೆ. ನನ್ನ ಈ ಕಾರ್ಯವು ಕರ್ನಾಟಕ ಏಕೀಕರಣದ ನಾಯಕ ಶ್ರೀ ಎಸ್. ನಿಜಲಿಂಗಪ್ಪನವರ ಮೆಚ್ಚುಗೆಗೆ ಪಾತ್ರವಾಯಿತು. ೧೯೫೬ರಲ್ಲಿ ನವೆಂಬರ್ ೧ನೇ ತಾರೀಖು ಕರ್ನಾಟಕ ರಾಜ್ಯೋದಯವಾಯಿತು. ಕನ್ನಡಿಗರ ಬಹುದಿನಗಳ ಕನಸು ನನಸಾಗಿತು. ಕರ್ನಾಟಕ ಶಿಲ್ಪಿ ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಕರ್ನಾಟಕ ಏಕೀಕರಣ ಹೋರಾಟದಲ್ಲಿ ನಾನು ಸಲ್ಲಿಸಿದ ಸೇವೆ ಸಾರ್ಥಕವಾಯಿತು. ೧೯೫೭ರಲ್ಲಿ ನಾನು ಬೆಂಗಳೂರಿಗೆ ಬಂದು ಆಗಸ್ಟ್ ತಿಂಗಳಲ್ಲಿ ಕರ್ನಾಟಕ ಹೈಕೋರ್ಟ್‌ನಲ್ಲಿ ಪ್ರಾಕ್ಟೀಸ್ ಆರಂಭಿಸಿದೆ. ೧೯೬೦ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ಮತ್ತು 'ಕನ್ನಡನುಡಿ' ಸಂಪಾದಕನಾದೆ. ಮೈಸೂರೇತರ ಕರ್ನಾಟಕದ ಪ್ರಥಮ ಗೌರವ ಕಾರ್ಯದರ್ಶಿ ಕನ್ನಡನುಡಿಯ ಕಿರಿಯ ವಯಸ್ಸಿನ ಸಂಪಾದಕ ಹಾಗೂ

* ನಂ. ೧೯, ೫ನೇ ಬ್ಲಾಕ್, ಜಯನಗರ, ಬೆಂಗಳೂರು-೫೬೦ ೦೪೧.

ಕನ್ನಡ ನಿಘಂಟು ಸಂಪಾದಕ ಸಮಿತಿಯ ಸದಸ್ಯನೂ ಆದೆ. ದಿ. ಪ್ರೊ. ತೀ.ನಂ. ಶ್ರೀಕಂಠಯ್ಯನವರ ಆದೇಶದಂತೆ ಕನ್ನಡ ನಿಘಂಟಿನ ಸರ್ಕಾರಿ ಒಪ್ಪಂದ ಮಾಡಿಸುವಲ್ಲಿ ನಾನು ಯಶಸ್ವಿಯಾದೆ. ಕನ್ನಡ ನಿಘಂಟಿನ ಮುದ್ರಣ ಪ್ರಾರಂಭ ವಾಯಿತು. ಪರಿಷತ್ತಿಗೆ ಶೇಕಡಾ ೧೬ರಷ್ಟು ರಾಯಲ್ಟಿ ಮತ್ತು ಒಂದು ಲಕ್ಷ ರೂಪಾಯಿ ಬೆಲೆಬಾಳುವ ಪ್ರಿಂಟಿಂಗ್ ಪ್ರೆಸ್ ಮತ್ತು ನೂತನ ಕಟ್ಟಡ ಕಟ್ಟಿಸುವ ಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸಿದೆ. ಸರಸ್ವತಿ ಭಂಡಾರದಿಂದ ಮಾಯವಾಗಿದ್ದ ಸುಮಾರು ೪ ಸಾವಿರ ಪುಸ್ತಕಗಳಲ್ಲಿ ಸುಮಾರು ೩ ಸಾವಿರ ಪುಸ್ತಕಗಳನ್ನು ಹುಡುಕಿ ಗ್ರಂಥ ಭಂಡಾರಕ್ಕೆ ಸೇರಿಸಿದೆ. ಅದೇ ವರ್ಷ ಪರಿಷತ್ತಿನ ಕಾರ್ಯಸಮಿತಿಗೆ, ಮತಯಾಚನೆಗೆ ಹೋಗದೆ, ಅತ್ಯಧಿಕ ಮತಗಳಿಂದ ಆಯ್ಕೆಯಾದೆ. ಪರಿಷತ್ತಿನ ಆರ್ಥಿಕ ಸ್ಥಿತಿ ಸುಧಾರಿಸಲು, ಕನ್ನಡ ಸಾಹಿತ್ಯ ಸಮ್ಮೇಳನ ನಡೆಸಲು ನಾನು ಶಕ್ತಿಮೀರಿ ಪ್ರಯತ್ನಿಸಿದೆ. ಪ್ರಶಂಸೆಗೆ ಪಾತ್ರನಾದೆ. ಕನ್ನಡ ದಿಗ್ಗಜರಾದ ಡಿವಿಜಿ, ಮಾಸ್ತಿ, ವೀಸಿ, ಎ.ಆರ್.ಕೃ. ತೀ.ನಂ.ಶ್ರೀ. ಕುವೆಂಪು, ಬೇಂದ್ರೆ, ಡಿಎಲ್‌ಎನ್, ಬಿ. ಶಿವಮೂರ್ತಿಶಾಸ್ತ್ರಿ, ಬಸವನಾಳ, ಮಲ್ಲಪ್ಪ ನಂದೀಮಠ, ಮಾಳವಾಡ, ಹಳಕಟ್ಟಿ, ಕುಂದಣಗಾರ ಮೊದಲಾದವರ ನಿಕಟ ಸಂಪರ್ಕ ಪಡೆಯುವ ಭಾಗ್ಯ ನನಗೆ ಲಭಿಸಿತು. ಡಿವಿಜಿಯವರ ಹಾರ್ದಿಕ ಹರಕೆಯನ್ನು ನಾನೆಂದೂ ಮರೆಯಲಾರೆ. ಈ ಎಲ್ಲ ಸಾಹಿತ್ಯ ಶ್ರೇಷ್ಠರ ಸಂಪರ್ಕದಿಂದ ಕನ್ನಡ ಸಾಹಿತ್ಯವನ್ನು ಬೆಳೆಸಿಕೊಂಡೆ ಮತ್ತು ಸಂಸ್ಕೃತಿ, ಸಭ್ಯತೆ, ಸಂಸ್ಕಾರ ಗಳಿಸಿಕೊಂಡೆ. ನನ್ನ ಬಾಳಿನ ಸುವರ್ಣ ಹಾಗೂ ಸಂಸ್ಮರಣೀಯ ಅಧ್ಯಾಯವದು.

೧೯೬೦ನೆಯ ನವೆಂಬರ್ ೨೯ರಂದು ಚಿ. ನೀಲಾಂಬಿಕೆ ವಾಣಿವಿಲಾಸ ಆಸ್ಪತ್ರೆಯಲ್ಲಿ ಹೆಣ್ಣು ಮಗುವಿಗೆ ಜನ್ಮವಿತ್ತಳು. ಡಾ. ದೇಸಾಯಿಯವರ ಸಕಾಲಿಕ ಆಪರೇಶನ್‌ನಿಂದ ತಾಯಿ ಮತ್ತು ಮಗು ಇಬ್ಬರೂ ಬದುಕಿದರು. ಆ ಪುಟ್ಟ ಮನೆಯಲ್ಲಿಯೇ ಅವಳ ಬಾಣಂತನ ನಡೆಯಿತು. ತಂದೆ ತಾಯ್ಗಳನ್ನು ಬಾಲ್ಯದಲ್ಲಿಯೇ ಕಳೆದುಕೊಂಡ ಅವಳನ್ನು ಮತ್ತು ಅವಳ ತಮ್ಮನನ್ನು ಗಂಡಜ್ಜಿ ಶ್ರೀಮತಿ ಗಿರಿಜಮ್ಮನೇ ಸಾಕಿ ಸಲುಹಿದ್ದಳು. ಅವರ ಶ್ರೀಮಂತ ಮನೆತನ ಕಾಲನ ಕ್ರೂರಚಕ್ರಕ್ಕೆ ಸಿಲುಕಿ ದಿಕ್ಕೆಟ್ಟಿತ್ತು. ಅವಳು ನನ್ನ ಒಡಹುಟ್ಟಿದ ಅಕ್ಕ ಶ್ರೀಮತಿ ವೀರಾಂಬೆಯ ಮಗಳು. ಲಿಂ. ಬಸಪ್ಪಾ ಮಾವನವರ ಕಾಲದಲ್ಲಿ ಅವರದು ಕೊಪ್ಪಳದಲ್ಲಿ ಪ್ರಸಿದ್ಧ ಮನೆತನ. ಆ ಅನಾಥಳನ್ನು ನಾನೇ ಕೈಹಿಡಿದಿದ್ದೆ. ಅವಳಿಗೆ ತಂದೆ ತಾಯಿ ಬಂಧು ಬಳಗ ನಾನೇ ಆಗಿದ್ದೆ. ನಾನು ಬಡವ, ಅವಳು ಬಡವಿ ಒಲವೇ ನಮ್ಮ ಆಸ್ತಿಯಾಗಿತ್ತು. ಪೂಜ್ಯ ತಂದೆ ಪಂ. ಕಲ್ಲಿನಾಥ ಶಾಸ್ತ್ರಿಗಳವರು ಮತ್ತು ಪೂಜ್ಯ ತಾಯಿ ದಾನಚಿಂತಾಮಣಿ ದಾನಮ್ಮನವರಿಗೆ ಮೊಮ್ಮಗಳು ಹುಟ್ಟಿದ್ದು ಅಪಾರ ಆನಂದವನ್ನುಂಟು ಮಾಡಿತ್ತು. ಆ ಮಗುವಿಗೆ 'ಚಂದ್ರಿಕಾ' ಎಂದು ನಾಮಕರಣ ಮಾಡಲಾಯಿತು. ಅವಳು ಚಂದ್ರಿಕೆಯಂತೆ ಬೆಳಕು ಬೀರಿದಳು. ಬಡವನಾದ ನಾನು ಅವಳಿಗೆ ಪ್ರೀತಿಯೊಂದನ್ನೇ ಕೊಡಲು ಸಮರ್ಥನಾದೆ. ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಕಾರ್ಯದರ್ಶಿ ಮತ್ತು ಕನ್ನಡ ನುಡಿ ಸಂಪಾದಕತ್ವದ ಎರಡೂ ಹೊಣೆಗಾರಿಕೆಯನ್ನು ನಿಭಾಯಿಸಿದೆ. ೧೯೬೪ರಲ್ಲಿ ಆಗಿನ ಹಣಕಾಸಿನ ಸಚಿವರಾಗಿದ್ದ ಮಾನ್ಯ ಶ್ರೀ ಬಿ.ಡಿ. ಜತ್ತಿಯವರು ನನ್ನನ್ನು ಅಖಿಲ ಭಾರತ ಬಸವ ಸಮಿತಿಯ ಪ್ರಧಾನ ಕಾರ್ಯದರ್ಶಿ ಎಂದು ನೇಮಕ ಮಾಡಿದರು. ಮಾನ್ಯ ಶ್ರೀ ಎಸ್. ನಿಜಲಿಂಗಪ್ಪ, ಡಾ. ಪಾವಟೆಯವರಂಥ ಹಿರಿಯರೊಂದಿಗೆ ಸೇವೆ ಸಲ್ಲಿಸುವ ಅವಕಾಶ ನನಗೆ ಲಭಿಸಿತು. ೧೯೬೬ರಲ್ಲಿ ಮುಖ್ಯಮಂತ್ರಿ ಮಾನ್ಯ ಶ್ರೀ ಎಸ್. ನಿಜಲಿಂಗಪ್ಪನವರು ಸ್ವಯಂಪ್ರೇರಣೆಯಿಂದ ನನ್ನನ್ನು ಪ್ರಥಮ ಕರ್ನಾಟಕ ಭಾಷಾ ಆಯೋಗದ ಸರ್ಕಾರೇತರ ಸದಸ್ಯನನ್ನಾಗಿ ನೇಮಿಸಿದರು. ಅವರು ನೀಡಲಿಚ್ಛಿಸಿದ ಜಿಲ್ಲಾ ನ್ಯಾಯಾಧೀಶರ ಪದವಿಯನ್ನು ನಾನು ನಮ್ರತೆಯಿಂದ ನಿರಾಕರಿಸಿದೆ. ನಾನು ಹುಟ್ಟು ಸ್ವತಂತ್ರ ಮನೋಧರ್ಮದ ಹಾಗೂ ಸಮಾಜ ಸೇವಾಸಕ್ತ. ಲಾ ಕಾಲೇಜಿನ ಪ್ರಾಧ್ಯಾಪಕ ವೃತ್ತಿ ೧೯೭೯ರ ವರೆಗೆ ಮುಂದುವರೆಯಿತು. ಲಾ ಕಾಲೇಜಿನಲ್ಲಿ ಕನ್ನಡ ಸಂಘವನ್ನು ಸ್ಥಾಪಿಸಿ ಅದರ ಅಧ್ಯಕ್ಷ ನಾಗಿ ನ್ಯಾಯ ದರ್ಶನ ಪ್ರಕಟಿಸಿದೆ. ವಿದ್ಯಾರ್ಥಿ ಸಂಘದ ಖಜಾಂಚಿಯಾಗಿ ಮತ್ತು ಮ್ಯಾಗ್‌ಝೈನ್ ಸಂಪಾದಕರಾಗಿ ಕಾರ್ಯ ಮಾಡಿ ಒಳ್ಳೆಯ ಪ್ರಾಧ್ಯಾಪಕನೆಂದು ಹೆಸರು ಗಳಿಸಿದೆ. ೧೯೬೩ರ ಫೆಬ್ರವರಿ ೯ರಂದು ಗಂಡು ಮಗು ಜನಿಸಿತು. ಆ ಮಗುವಿಗೆ 'ಉದಯ ಶಂಕರ'ನೆಂದು ನಾಮಕರಣ ಮಾಡಲಾಯಿತು. ೧೯೬೩ರ ಯುಗಾದಿಯಂದು ಪ್ರಾತಃಸ್ಮರಣೀಯರಾದ ಪೂಜ್ಯ ಶ್ರೀ ಮೃತ್ಯುಂಜಯ ಶಿವಯೋಗಿಗಳವರು, ಮಂತ್ರಿಯ ಮನೆಗೆ ಹೋಗದೆ ನಮ್ಮ ಮನೆಗೆ ದಯಮಾಡಿಸಿ ಆಶೀರ್ವದಿಸಿದ್ದು ಚಿರಸ್ಮರಣೀಯ. ನನಗಿದ್ದ ಪರಿಮಿತ ಆದಾಯದಲ್ಲಿ ಸಂಸಾರವು ಸುಸೂತ್ರವಾಗಿ ಸಾಗಿತು. ಶ್ರೀ ಶಿವಯೋಗೀಶ್ವರರ ಕೃಪೆಯಿಂದ ನಾನು ಕರ್ತವ್ಯ ನಿರ್ವಹಣೆಯನ್ನು ಶಿವಪೂಜೆ ಎಂದು ಭಾವಿಸಿದೆ. ವಕೀಲಿ





ವೃತ್ತಿಯಲ್ಲಿ ಪ್ರಾಮಾಣಿಕತೆ ಹಾಗೂ ಪಾರದರ್ಶಕತೆಗೆ ಪ್ರಥಮಸ್ಥಾನ ನೀಡಿದೆ. ಎಂದೂ ಕರ್ತವ್ಯ ಭ್ರಷ್ಟನಾಗಲಿಲ್ಲ. ಹಣ ಸಂಪಾದನೆ ನನ್ನ ಮುಖ್ಯ ಗುರಿಯಾಗಿರಲಿಲ್ಲ. ಅನ್ಯಾಯಕ್ಕೆ ಒಳಗಾದವರಿಗೆ ನ್ಯಾಯ ದೊರಕಿಸಿ ಕೊಡುವುದೇ ನನ್ನ ಆದ್ಯ ಧ್ಯೇಯವಾಗಿತ್ತು. ಯಾರ ದಾಕ್ಷಿಣ್ಯಕ್ಕೂ ಒಳಗಾಗದೆ ನ್ಯಾಯನಿಷ್ಠುರಿಯಾಗಿ, ನಿರ್ಭೀತನಾಗಿ ಹಾಗೂ ನಿಷ್ಪನಾಗಿ ನಾನು ವಕೀಲಿ ವೃತ್ತಿಯನ್ನು ನಿರ್ವಹಿಸಿದೆ. ಅನೇಕ ಬಡ ಕುಟುಂಬಗಳಿಗೆ ಉಚಿತವಾಗಿ ನ್ಯಾಯ ದೊರಕಿಸಿಕೊಟ್ಟೆ. ಶೇಕಡಾ ತೊಂಭತ್ತೈದರಷ್ಟು ಕೇಸುಗಳಲ್ಲಿ ನನ್ನ ಪರಿಶ್ರಮ ಪರಿಣಿತಿ ಹಾಗು ಪಾರದರ್ಶಕತೆಯಿಂದ ಜಯ ಸಾಧಿಸಿ, ಬೆಂಚ್ ಮತ್ತು ಬಾರ್‌ನ ಪ್ರೀತಿ ಪ್ರಶಂಸೆಗೆ ಪಾತ್ರನಾದೆ.

ನನ್ನ ಸಂಸಾರ, ಪೂಜ್ಯ ಯಜಮಾನರ ಸಾನ್ನಿಧ್ಯದಲ್ಲಿ ನಿರಾತಂಕವಾಗಿ ಸಾಗಿತ್ತು. ೧೯೭೯ರಲ್ಲಿ ನಾನು ಹೈಕೋರ್ಟಿನಲ್ಲಿ ಸರ್ಕಾರಿ ವಕೀಲನೆಂದು ನೇಮಕಗೊಂಡೆ. ಪ್ರಾಧ್ಯಾಪಕ ವೃತ್ತಿಗೆ ರಾಜೀನಾಮೆ ನೀಡಿ ಹಿರಿಯರ ಆದೇಶದಂತೆ ಹೊಸ ಹುದ್ದೆಯನ್ನು ಒಪ್ಪಿಕೊಂಡೆ. ನನ್ನ ಪ್ರಾಕ್ಟೀಸ್ ಆದಾಗಲೇ ಕುದುರಿತ್ತು. ಪೂಜ್ಯ ಪಿತಾಜಿಯವರ ಆರೋಗ್ಯ ಹದಗೆಟ್ಟಿತ್ತು. ಅವರನ್ನು ಜಯಚಾಮರಾಜೇಂದ್ರ ಆಯುರ್ವೇದ ಆಸ್ಪತ್ರೆಯಲ್ಲಿ ಸೇರಿಸಲಾಯಿತು. ಅವರಿಗೆ ಮಂಡಿನೋವು, ನಾವಿದ್ದ ಚಿಕ್ಕಮನೆಯಲ್ಲಿ ಅವರಿಗಾಗಿ ಪ್ರತ್ಯೇಕ ಕೋಣೆ ಇರಲಿಲ್ಲ. ೧೯೬೫ರಲ್ಲಿ ಜಯನಗರದ ೫ನೇ ಬ್ಲಾಕಿನಲ್ಲಿ ಹೌಸಿಂಗ್ ಬೋರ್ಡ್ ಮನೆ ನನಗೆ ಅಲಾಟ್ ಆಗಿತ್ತು. ಅದೂ ಕೂಡ ತುಂಬಾ ಚಿಕ್ಕದು. ಪೂಜ್ಯ ಯಜಮಾನರನ್ನು ಮನೆಗೆ ಕರೆತರಬೇಕು ಮತ್ತು ಅವರು ಆಸ್ಪತ್ರೆಯಲ್ಲಿ ಅಸುನೀಗಬಾರದೆಂಬ ವಿಚಾರ ಹೊಳೆದು, ಜಯನಗರದ ಮನೆಗೆ ಒಂದೆರೆಡು ಹೊಸ ಕೋಣೆಗಳನ್ನು ಕಟ್ಟಿಸಲು ನಿರ್ಧರಿಸಿದೆ. ನನ್ನ ಆದಾಯ ವೆಚ್ಚ ಸಮವಾಗಿ ನಾನು ಹಣ ಉಳಿಸಲು ಸಾಧ್ಯವಾಗಿರಲಿಲ್ಲ. ಮಾನ್ಯ ಶ್ರೀ ಜತ್ತಿಯವರಲ್ಲಿ ಈ ವಿಷಯ ಪ್ರಸ್ತಾಪಿಸಿ ಬ್ಯಾಂಕಿನಿಂದ ಸಾಲ ಕೊಡಿಸಬೇಕೆಂದು ಕೋರಿದೆ. ಅವರು ಕೂಡಲೇ ಸಿಂಡಿಕೇಟ್ ಬ್ಯಾಂಕ್ ಮ್ಯಾನೇಜರಿಗೆ ಫೋನ್ ಮಾಡಿ ಐದು ಸಾವಿರ ಓವರ್ ಡ್ರಾಫ್ಟ್ ಕೊಡಿಸಿದರು. ನನಗೆ ಶ್ಯೂರಿಟಿಯನ್ನು ಸಹ ಕೊಟ್ಟರು. ನನ್ನಣ್ಣ ಬೆಂಗಳೂರಿನಲ್ಲಿಯೇ ಇದ್ದರೂ ಅವರ ಸಹಾಯ ನಾನು ಯಾಚಿಸಿರಲಿಲ್ಲ. ಓರ್ವ ಇಂಜಿನಿಯರ್ ಶ್ರೀ ಗೋವಿಂದರಾಜು ಜಯನಗರದ ಮನೆ ವಿಸ್ತರಿಸಿಕೊಡಲು ಒಪ್ಪಿಕೊಂಡರು. ಐದುಸಾವಿರ ಓವರ್‌ಡ್ರಾಫ್ಟಿನಲ್ಲಿ ಮನೆಯ ನಿರ್ಮಾಣದ ಕಾರ್ಯ ಮುಂದುವರೆಯಿತು. ಆಗ ಮಾನ್ಯ ಶ್ರೀ ಜತ್ತಿ ಯವರ ಎದುರಿಗೆ ಕೇಸ್ ಬಂದರೂ ನಾನು ತೆಗೆದುಕೊಳ್ಳಲಿಲ್ಲ. ಬೆಳಿಗ್ಗೆ ಕಾಲೇಜು, ಮಧ್ಯಾಹ್ನ ಕೋರ್ಟ್ ಹಾಗೂ ಅಪರಾಹ್ನ ಭಾಷಾ ಆಯೋಗದ ಮೀಟಿಂಗ್, ಸಂಜೆ ಜಯನಗರದ ಕಟ್ಟಡದ ಪರಿಶೀಲನೆ, ರಾತ್ರಿ ಪೂಜ್ಯ ಯಜಮಾನರ ಸಂದರ್ಶನ. ರಾತ್ರಿ ಹತ್ತು ಹನ್ನೊಂದು ಘಂಟೆಯವರೆಗೆ ನಾನು ದಣಿವರಿಯದೆ ಶ್ರಮಿಸಿದೆ. ನಾನು ನೀತಿಯನ್ನು ಬಲಿಗೊಡಲಿಲ್ಲ. ಹೊಸ ಕೇಸುಗಳು ಬಂದವು. ೧೯೬೮ರಲ್ಲಿ ಜಯನಗರದ ಹೊಸ ಮನೆ ಸಿದ್ಧವಾಯಿತು. ಪೂಜ್ಯ ಯಜಮಾನರನ್ನು ಹೊಸಮನೆಗೆ ಕರೆದು ತರಲಾಯಿತು. ಹೊಸ ಮನೆ ನೋಡಿ ಅವರಿಗೆ ಸಂತೋಷವಾಯಿತು. ನನ್ನಣ್ಣ ಐಎಎಸ್ ಆಫೀಸರ್ ಮತ್ತು ಕಾಲೇಜ್ ಪ್ರೊಫೆಸರ್ ಇಬ್ಬರಿಗೂ ಕಾಯಂ ಹಾಗೂ ಸಾಕಷ್ಟು ಆದಾಯವಿತ್ತು. ನನಗೆ ಕಾಯಂ ಆದಾಯ ವಿರಲಿಲ್ಲ. ಅಷ್ಟೇ ಅಲ್ಲದೆ ಆದರ್ಶ ಹಾಗೂ ಶರಣ ಜೀವನವನ್ನು ಬಾಳುತ್ತಾ ಬಂದಿದ್ದ ನಾನು ಹೆಚ್ಚು ಸಂಪಾದಿಸಿರಲಿಲ್ಲ. ನನ್ನ ಚಿಂತೆ ಪೂಜ್ಯ ಯಜಮಾನರಿಗಿತ್ತು. ಈ ಮನೆ ನೋಡಿ ಅವರಿಗೆ ಕೊಂಚ ನೆಮ್ಮದಿಯಾಯಿತು. ತುಂಬಾ ಸಂಕಷ್ಟಗಳು ಬಂದರೂ ನಾನು ಯಾರ ಆಶ್ರಯವನ್ನು ಕೋರಿರಲಿಲ್ಲ. ನನ್ನ ಸಹಧರ್ಮಿಣಿ ಮತ್ತು ನನ್ನ ಮಕ್ಕಳು ನನ್ನೊಂದಿಗೆ ಸಹಕರಿಸಿ ಇದ್ದುದರಲ್ಲಿಯೇ ಸಂತಸದಿಂದ ಬಾಳುತ್ತಿದ್ದರು. ಪೂಜ್ಯ ಯಜಮಾನರು ನಿಜವಾಗಿಯೂ ಯೋಗಿಗಳು. ಅವರು ಇಹವನ್ನು ಗೆದ್ದು ಪರದತ್ತ ಸಾಗಿದ್ದರು. ಪೂಜ್ಯ ಚಿತ್ರದುರ್ಗದ ಆಗಿನ ಜಗದ್ಗುರುಗಳವರು ನಮ್ಮ ಹೊಸ ಮನೆಗೆ ದಯ ಮಾಡಿಸಿದಾಗ ನನಗೆ ಯಾವ ಅಪೇಕ್ಷೆ ಇಲ್ಲ ಎಂದು ಹೇಳಿ ಅವರ ಮೆಚ್ಚುಗೆಗೆ ಪಾತ್ರರಾಗಿದ್ದರು. ಅವರಿಗೆ ಯಾವ ಬಯಕೆಯೂ ಇರಲಿಲ್ಲ. ಸದಾ ಶಿವನ ಧ್ಯಾನದಲ್ಲಿ ಮಗ್ನರಾಗಿದ್ದರು. ೧೯೬೮ ಡಿಸೆಂಬರ್ ಸೋಮವಾರ ಬೆಳಿಗ್ಗೆ ೯ ಗಂಟೆಗೆ ಅವರು ನಗುನಗುತ್ತ ಶಿವಸಾನ್ನಿಧ್ಯವನ್ನು ಸೇರಿದರು. ಅವರ ಶಿವ ಸಮಾಧಿಯನ್ನು ಕೊಳದ ಮಠದಲ್ಲಿ ಮಾಡಲಾಯಿತು. ಸಂತಾಪ ಸೂಚಕ ಸಭೆಯಲ್ಲಿ ಹಿರಿಯ ಸಾಹಿತಿಗಳಾದ ಶ್ರೀ ಅ.ನ.ಕೃ. ಪಂಡಿತರತ್ನ ಬಿ. ಶಿವಮೂರ್ತಿ ಶಾಸ್ತ್ರಿಗಳವರು ಮೊದಲಾದವರು ತಂದೆಯವರನ್ನು ಮುಕ್ತಕಂಠದಿಂದ ಪ್ರಶಂಸಿಸಿದರು. ಅಳಿಯದೆ ಕೂಡಿದ ಶಿವಯೋಗಿಗಳವರು. ಇಂದಿಗೂ ಅವರ ಚೇತನ ನಮ್ಮೊಂದಿಗಿದೆ, ನಮ್ಮನ್ನು ಕಾಪಾಡುತ್ತಿದೆ.

❑

# ಶ್ರೀಮಠದ ಹಳೆಯ ವಿದ್ಯಾರ್ಥಿ – ಚಿನ್ನದ ಪದಕಗಳ ಸರದಾರ ಶ್ರೀ ಎನ್.ಜಿ. ಬಸವರಾಜು

– ಎಚ್.ಎಸ್. ಸಿದ್ಧಗಂಗಪ್ಪ *

ತ್ರಿವಿಧ ದಾಸೋಹಮೂರ್ತಿ, ಕರ್ನಾಟಕ ರತ್ನ, ಪದ್ಮಭೂಷಣ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ಲಕ್ಷಾಂತರ ಬಡವಿದ್ಯಾರ್ಥಿಗಳಿಗೆ ಆಶ್ರಯ ಮತ್ತು ಮಾರ್ಗದರ್ಶನ ನೀಡಿ ಅವರ ಭವಿಷ್ಯವನ್ನು ರೂಪಿಸಿ ಸಮಾಜದಲ್ಲಿ ಉತ್ತಮ ನಾಗರಿಕರಾಗಿ ನೆಮ್ಮದಿಯಿಂದ ಜೀವನ ನಡೆಯುವಂತೆ ಮಾಡಿದ್ದಾರೆ. ಸಾವಿರಾರು ಜನ ಇಂದು ದೇಶವಿದೇಶಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಾಶೀರ್ವಾದ ಎಂಬ ಸ್ಪರ್ಶಮಣಿಯಿಂದ ಅಜ್ಞಾತ ಕಲ್ಲುಗಳು ಮೂರ್ತಿಗಳಾಗಿ ರೂಪುಗೊಂಡು ಸಮಾಜ ಗೌರವದಿಂದ ನೋಡುವಂತಾಗಿದೆ. ಶ್ರೀಮಠದಲ್ಲಿದ್ದು ವ್ಯಾಸಂಗ ಮಾಡಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡ ಅಸಂಖ್ಯಾತ ಪ್ರತಿಭಾವಂತ ವಿದ್ಯಾರ್ಥಿಗಳಲ್ಲಿ ಶ್ರೀ ಎನ್.ಜಿ. ಬಸವರಾಜು ಒಬ್ಬರು ಎಂದು ಹೇಳಲು ಅಭಿಮಾನವೆನಿಸುತ್ತದೆ. ಪೂಜ್ಯ ಶ್ರೀ ಶ್ರೀಗಳವರ ಕೃಪೆಯಿಂದ ಸಾಧನೆಗಳನ್ನು ಮುಡಿಗೇರಿಸಿಕೊಂಡ ಯಶೋಗಾಥೆ ಇಲ್ಲಿದೆ.

ಶ್ರೀ ಎನ್.ಜಿ. ಬಸವರಾಜು ಅವರು ಹುಟ್ಟಿದ್ದು ತುಮಕೂರು ಜಿಲ್ಲೆ ತಿಪಟೂರು ತಾಲ್ಲೂಕು ನೊಣವಿನಕೆರೆ ಸಮೀಪದಲ್ಲಿರುವ ತೋಟದ ಮಧ್ಯೆ ಇರುವ ಪುಟ್ಟ ಗುಡಿಸಲಿನಲ್ಲಿ. ಹುಟ್ಟಿದ ದಿನಾಂಕ ೨, ಜನವರಿ ೧೯೭೭. ತಂದೆ ಶ್ರೀ ಗುರುಬಸಪ್ಪ, ತಾಯಿ ಶ್ರೀಮತಿ ಸರೋಜಮ್ಮ. ಹುಟ್ಟಿನೊಂದಿಗೆ ಅಂಟಿಕೊಂಡು ಬಂದಿದ್ದು ಬಡತನ. ಅವರದು ಸುಸಂಸ್ಕೃತ ಅವಿಭಕ್ತ ಕುಟುಂಬ. ಬಡತನವಿದ್ದರೂ ಹೃದಯ ಶ್ರೀಮಂತಿಕೆಗೆ ಕಡಿಮೆಯಿರಲಿಲ್ಲ. ಅವರಿಗೆ ಯುಗಾದಿಗಿಂತ ಶಿವರಾತ್ರಿಯೇ ಒಗ್ಗಿ ಹೋಗಿತ್ತು. ಆದರೆ ಅವರು ಪಾಲಿಗೆ ಬಂದುದು ಪಂಚಾಮೃತ ಎಂಬ ಭಾವನೆ ಯನ್ನು ರೂಢಿಸಿಕೊಂಡಿದ್ದರು. ಅವರ ತಾತ ವೇದಾಂತಿ ಬಸಪ್ಪನವರ ದೈವ ಭಕ್ತಿ, ನಡೆ-ನುಡಿ, ಪರೋಪಕಾರ ಬಾಲಕ ಬಸವರಾಜು ಮೇಲೆ ಪ್ರಭಾವನ್ನು ಬೀರಿತು. ಜ್ಞಾನದ ಹಸಿವಿನ ಮುಂದೆ ಬಡತನ ಸೋತಿತು. ಜ್ಞಾನರತ್ನವನ್ನು ತನ್ನದಾಗಿಸಿಕೊಳ್ಳಬೇಕೆಂಬ ಹಂಬಲ ಕಷ್ಟಗಳನ್ನು ಎದುರಿಸುವ ಶಕ್ತಿಯನ್ನು ತಂದುಕೊಟ್ಟಿತು.



### ಶಿಕ್ಷಣ

ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದ ಮಗನನ್ನು ಪ್ರೌಢಶಿಕ್ಷಣ ಎಲ್ಲಿ ಸೇರಿಸಬೇಕು ಎಂಬ ಜಿಜ್ಞಾಸೆ ಅವರಲ್ಲಿ ತಳಮಳವನ್ನು ಉಂಟಾಯಿತು. ಮಾಧ್ಯಮಿಕ ಶಾಲೆಯಲ್ಲಿ ಪ್ರತಿಭಾವಂತ ವಿದ್ಯಾರ್ಥಿ ಎನಿಸಿಕೊಂಡ ಮಗನನ್ನು ಪ್ರೌಢಶಾಲೆಗೆ ಸೇರಿಸಲು ಆರ್ಥಿಕ ಪರಿಸ್ಥಿತಿ ಎದುರಾಯಿತು. ಭವಿಷ್ಯವನ್ನು ರೂಪಿಸುವ ದೃಷ್ಟಿಯಿಂದ ಶ್ರೀಮಠಕ್ಕೆ ಕರೆದುಕೊಂಡು ಹೋಗಿ ಪೂಜ್ಯ ಶ್ರೀಗಳವರ ಮಡಿಲಿಗೆ ಹಾಕಿ ನಿಶ್ಚಿಂತೆಯಿಂದ ಊರಿಗೆ ಹೋದರು.

ತನ್ನ ಜೀವನವನ್ನು ರೂಪಿಸಿಕೊಳ್ಳಲು ತಾನಾಗಿಯೇ ಒದಗಿಬಂದ ಉತ್ತಮ ಅವಕಾಶ ಎಂದು ಭಾವಿಸಿದ ಬಸವರಾಜು ಶಾಲಾ ವ್ಯಾಸಂಗದ ಜೊತೆಗೆ ವೇದ, ಸಂಸ್ಕೃತವನ್ನು ವ್ಯಾಸಂಗ ಮಾಡಿದರು. ಪರೀಕ್ಷೆಯಲ್ಲಿ ಹೆಚ್ಚಿನ ಅಂಕಗಳನ್ನು ಪಡೆದು ಉನ್ನತ ದರ್ಜೆಯಲ್ಲಿ ಉತ್ತೀರ್ಣನಾಗ ಬೇಕೆಂಬ ಛಲ, ಹಠ, ಸಾಧನೆಯ ಅಡಿಪಾಯವಾಯಿತು. ಪ್ರಾರ್ಥನಾ ಸಂದರ್ಭದಲ್ಲಿ ಪರಮಪೂಜ್ಯ ಶ್ರೀಗಳವರು ತಮ್ಮ ಶಿವನುಡಿಯಲ್ಲಿ ಹೇಳುತ್ತಿದ್ದ ಕಾಲದ ಮಹತ್ವವನ್ನು ಅರ್ಥಮಾಡಿಕೊಂಡು ಒಂದೊಂದು ನಿಮಿಷವೂ ಅಮೂಲ್ಯವೆಂದು ಭಾವಿಸಿ ಸದುಪಯೋಗಪಡಿಸಿ ಕೊಂಡ ಫಲವಾಗಿ ಉತ್ತಮಶ್ರೇಣಿಯಲ್ಲಿ ಉತ್ತೀರ್ಣರಾಗಲು ಸಾಧ್ಯವಾಯಿತು.




### ಕಾಲೇಜು ಶಿಕ್ಷಣ

ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗಿ ಕಾಲೇಜಿಗೆ ಪ್ರವೇಶಾವಕಾಶ ಪಡೆದರೂ ಆರ್ಥಿಕ ಸಮಸ್ಯೆಯಿಂದ ಶಿಕ್ಷಣವನ್ನು ಮುಂದುವರಿಸಲಾಗಲಿಲ್ಲ. ತಾತನವರಾದ ಬಸಪ್ಪನವರು ದೈವಾಧೀನರಾದುದರಿಂದ ಅವಿಭಕ್ತ ಕುಟುಂಬದ ಹೊಣೆ ತಂದೆಯವರ ಮೇಲೆ ಬಿದ್ದುದರಿಂದ ಸಂಸಾರವನ್ನು ನಿರ್ವಹಿಸಲು ಸಾಲ ಪಡೆಯಬೇಕಾದ ಅನಿವಾರ್ಯ ಸ್ಥಿತಿ ಒದಗಿರುವುದರಿಂದ ತಂದೆಯವರಿಗೆ ನೆರವಾಗಲು ಹಗಲು ಕಾಲೇಜು ಶಿಕ್ಷಣವನ್ನು ಮೊಟಕುಗೊಳಿಸಿ ಕೆಲಸಕ್ಕೆ ಸೇರಿಕೊಂಡರು. ಆದರೆ ಅವರಲ್ಲಿದ್ದ ಜ್ಞಾನದಾಹ ಸುಮ್ಮನಿರಲು ಬಿಡಲಿಲ್ಲ. ಶಿಕ್ಷಣವನ್ನು ಮುಂದುವರಿಸಬೇಕು ಎಂಬ ಉದ್ದೇಶದಿಂದ ಸಂಜೆ ಕಾಲೇಜಿನಲ್ಲಿ ಎರಡು ವರ್ಷದ ಐ.ಟಿ.ಐ. ಆಟೋ ವಿಷಯದಲ್ಲಿ ಶಿಕ್ಷಣವನ್ನು ಮುಂದುವರೆಸಿ ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣರಾದರು.



ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಶ್ರೀ ಬಸವರಾಜು

### ಚಿನ್ನದ ಪದಕಗಳ ಸರದಾರ

ಐ.ಟಿ.ಐ. ಪರೀಕ್ಷೆಯಲ್ಲಿ ಹೆಚ್ಚು ಅಂಕಗಳನ್ನು ಪಡೆದು ಚಿನ್ನದ ಪದಕವನ್ನು ತಮ್ಮ ಮುಡಿಗೇರಿಸಿಕೊಂಡರು. ನಂತರ ಅಪ್ರೆಂಟಿಶಿಪ್(ವಿದ್ಯಾರ್ಥಿ ತರಬೇತಿ) ವಿಭಾಗದಲ್ಲಿ ರಾಷ್ಟ್ರಮಟ್ಟದಲ್ಲಿ ಪ್ರಥಮ ರ್‍ಯಾಂಕ್ ಪಡೆದು ಉತ್ತೀರ್ಣರಾಗಿ ಮತ್ತೊಂದು ಚಿನ್ನದ ಪದಕವನ್ನು ಪಡೆದರು. ದಕ್ಷಿಣ ಭಾರತದ ತಾಂತ್ರಿಕ ಕೌಶಲ್ಯ ಸ್ಪರ್ಧೆಯಲ್ಲಿ ರಾಜ್ಯಕ್ಕೆ ಪ್ರಥಮ ಸ್ಥಾನಗಳಿಸುವುದರ ಮೂಲಕ ಚಿನ್ನದ ಪದಕವನ್ನು ತಂದುಕೊಟ್ಟ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಸಂಜೆವಾಣಿ ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿಯನ್ನು ಮಿತ್ರರೊಬ್ಬರು ಹೇಳಿ ಪತ್ರಿಕೆಯನ್ನು ತಂದು ಕೊಟ್ಟಾಗ ಪರಿಶ್ರಮಕ್ಕೆ ಸಿಕ್ಕ ಪ್ರತಿಫಲ ಎಂದು ಸಂತೋಷಪಟ್ಟರು. ಇದೆಲ್ಲ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದ ಎಂದು ಕೃತಜ್ಞತೆಯಿಂದ ಸದಾ ಸ್ಮರಿಸುತ್ತಾರೆ.



ಗಗನ ಯಾತ್ರಿ ವೇಷದಲ್ಲಿ – ಬಿಜ್ಜಳನ ಪಾತ್ರದಲ್ಲಿ ಶ್ರೀ ಬಸವರಾಜು

### ಉದ್ಯೋಗ

ಚಿನ್ನದ ಪದಕಗಳನ್ನು ಪಡೆದ ಕೀರ್ತಿಗೆ ಭಾಜನರಾದರೂ ಉದ್ಯೋಗ ಅಷ್ಟು ಸುಲಭವಾಗಿ ದೊರೆಯಲಿಲ್ಲ. ಹತ್ತಾರು ಕಡೆ ಅರ್ಜಿಯನ್ನು ಹಾಕಿ ಜಾತಕ ಪಕ್ಷಿಯಂತೆ ಕಾದರು. ಕೆಲವು ಕಡೆ ನೀವು ಇಷ್ಟೊಂದು ಚಿನ್ನದ ಪದಕ ಪಡೆದಿದ್ದೀರಿ. ಉದ್ಯೋಗ ದೊರೆಯುವುದರಲ್ಲಿ ಅನುಮಾನವಿಲ್ಲ ಎಂದು ಪ್ರಶಂಸಿಸಿದರೂ. ನಕಾರಾತ್ಮಕವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಬಸವರಾಜು ಅವರು ಬೇಸರ ಪಡದೆ ಅವರ ಮಾತುಗಳನ್ನು ಸಕಾರಾತ್ಮಕವಾಗಿಯೇ ಸ್ವೀಕರಿಸಿದರು. ಮೊದಲಿನಿಂದಲೂ ಉಪನ್ಯಾಸಕರಾಗಬೇಕೆಂಬ ಹಂಬಲಬಿತ್ತು. ಐ.ಟಿ.ಐ. ಕಾಲೇಜಿನಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದರು.

* ನಂ. ೧೬೧೭, 'ಮಾತೃಶ್ರೀ', ಸರ್. ಎಂ. ವಿಶ್ವೇಶ್ವರಯ್ಯ ಮುಂದುವರಿದ ಬಡಾವಣೆ, ಆನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು – ೫೬೦ ೦೯೧.

ಜೀವನ ನಡೆಸಲು ದೊರೆತ ಅವಕಾಶವನ್ನೇ ಸದುಪಯೋಗಪಡಿಸಿಕೊಂಡರು. ಅವರು ಸರಳವಾಗಿ, ಸುಲಭವಾಗಿ ಅರ್ಥವಾಗುವಂತೆ ಬೋಧಿಸುತ್ತಿದ್ದ ರೀತಿ ವಿದ್ಯಾರ್ಥಿಗಳನ್ನು ಆಕರ್ಷಿಸಿತು. ಅಷ್ಟೇ ಅಲ್ಲ ಅಲ್ಪಕಾಲದಲ್ಲಿಯೇ ಅವರೊಬ್ಬ ಉತ್ತಮ ಉಪನ್ಯಾಸಕರೆಂಬ ಪ್ರಶಂಸೆಗೂ ಪಾತ್ರರಾದರು.

**ವಿದೇಶದಲ್ಲಿ ವೃತ್ತಿ**

ಶ್ರೀ ಬಸವರಾಜು ಅವರ ಪ್ರತಿಭೆಯ ಬಗ್ಗೆ ತಿಳಿದ ಹೆಸರಾಂತ ಉದ್ಯಮಿ ಶ್ರೀ ಸತೀಶ್ ಚಂದ್ರ ಭಂಡಾರಿಯವರು ಕೊಲ್ಲಿ ರಾಷ್ಟ್ರವಾದ ಒಮಾನ್ ದೇಶದಲ್ಲಿದ್ದ ತಮ್ಮ ಸಂಸ್ಥೆಯಲ್ಲಿ ಕೆಲಸ ಮಾಡಲು ಆಹ್ವಾನ ನೀಡಿದರು. ತಾನಾಗಿಯೇ ಒದಗಿ ಬಂದ ಸದಾವಕಾಶವನ್ನು ಒಪ್ಪಿಕೊಂಡರು. ಬಯಸದೇ ಬಂದ ಭಾಗ್ಯ. ೧೯೯೪ರಲ್ಲಿ ಒಮಾನ್ ರಾಷ್ಟ್ರಕ್ಕೆ ಪ್ರಯಾಣ ಬೆಳೆಸಿ ಉದ್ಯೋಗಕ್ಕೆ ಸೇರಿಕೊಂಡರು. ಈ ಅವಕಾಶ ತಮ್ಮ ಭವಿಷ್ಯವನ್ನು ಬದಲಾಯಿಸಿತು. ಕೈಕೆಸರಾದರೆ ಬಾಯಿ ಮೊಸರು ಎಂಬ ಗಾದೆ ಬಸವರಾಜು ಅವರ ಪಾಲಿಗೆ ನಿಜವಾಯಿತು. ತಾವು ಬಾಲ್ಯದಿಂದ ಕಟ್ಟಿಕೊಂಡ ಕನಸು ಸಾಕಾರಗೊಳ್ಳಲು ದೊರಕಿದ ಒಂದು ಉತ್ತಮ ಅವಕಾಶವನ್ನು ಸಮರ್ಥವಾಗಿ ಬಳಸಿಕೊಂಡು ಪ್ರಗತಿಯ ಮೆಟ್ಟಿಲುಗಳನ್ನು ಏರತೊಡಗಿದರು.

ಎರಡು ವರ್ಷ ಕೆಲಸಮಾಡಿ ಹಣವನ್ನು ಸಂಗ್ರಹಿಸಿಕೊಂಡು ಸ್ವದೇಶಕ್ಕೆ ಹಿಂತಿರುಗುವ ಉದ್ದೇಶವನ್ನಿಟ್ಟುಕೊಂಡು ಬಂದ ಬಸವರಾಜು ಅವರಿಗೆ ಹಿಂದಿರುಗಬೇಕೆನ್ನುವ ಕನಸು ಕನಸಾಗಿಯೇ ಉಳಿಯಿತು. ಎರಡು ವರ್ಷದಿಂದ ಆರು ವರ್ಷಗಳವರೆಗೆ ಮುಂದೂಡುವ ಅನಿವಾರ್ಯತೆ ಉಂಟಾಯಿತು. ಆರು ವರ್ಷಗಳ ನಂತರ ತಾಯ್ನಾಡಿಗೆ ಹಿಂದಿರುಗಲು ಸಿದ್ಧತೆ ನಡೆಸುತ್ತಿರುವಾಗಲೇ ಇನ್ನು ಒಳ್ಳೆಯ ಉದ್ಯೋಗ ದೊರೆಯಿತು. ಯು.ಎ.ಇ. ರಾಷ್ಟ್ರದ ಅಬುದಾಬಿಗೆ ಪ್ರಯಾಣ ಬೆಳೆಸಿದರು. ಅದೊಂದು ಉತ್ತಮ ಹೆಸರಾಂತ ಸಂಸ್ಥೆ. ಆ ಸಂಸ್ಥೆಯಲ್ಲಿ ಜರ್ಮನ್, ಅಮೆರಿಕ, ಯುರೋಪ್ ಮತ್ತು ಇತರೆ ಅಂತರರಾಷ್ಟ್ರೀಯ ಆಟೋವಾಹನ ವಿಭಾಗದ ಅನೇಕ ಮಾದರಿಗಳ ಬಗ್ಗೆ ವಿಸ್ತೃತ ಅಧ್ಯಯನ ನಡೆಸುವ ಸದಾವಕಾಶ ದೊರೆತು ವೃತ್ತಿಯಲ್ಲಿ ಪರಿಣತಿಯನ್ನು ಪಡೆಯಲು ಅವಕಾಶವಾಯಿತು. ಅವರಲ್ಲಿನ ಕಾರ್ಯಶ್ರದ್ಧೆ, ಉತ್ಸಾಹ, ವಾಹನಗಳಲ್ಲಿ ಕಂಡು ಬರುವ ದೋಷಗಳನ್ನು ಕಂಡು ಹಿಡಿದು ಪರಿಹಾರ ಮಾಡುವ ಚಾಕಚಕ್ಯತೆ, ಅಳವಾದ ಜ್ಞಾನ,



ವಿದ್ಯಾರ್ಥಿಗಳಿಗೆ ತರಬೇತಿ ನೀಡುತ್ತಿರುವ ಶ್ರೀ ಬಸವರಾಜು

ವೃತ್ತಿಯಲ್ಲಿನ ಪರಿಣತಿ ಮೊದಲಾದ ಗುಣಗಳಿಂದ ಸಂಸ್ಥೆಯ ಹಿರಿಯ ಅಧಿಕಾರಿಗಳ ವಿಶ್ವಾಸಕ್ಕೆ, ಪ್ರೀತಿಗೆ ಪಾತ್ರರಾದರು. ಇದರಿಂದ ೨೦೦೪ರಲ್ಲಿ ಪೀಜಟ್ ಸಂಸ್ಥೆಯವರು ಆಯೋಜಿಸಿದ್ದ ಈಜಿಪ್ಟ್ ಪ್ರವಾಸಕ್ಕೆ ಆಯ್ಕೆಯಾದರು. ಈಜಿಪ್ಟ್ ಪ್ರವಾಸದಲ್ಲಿ ವೃತ್ತಿಗೆ ಸಂಬಂಧಿಸಿದ ವಿಷಯವನ್ನು ಕುರಿತು ಅಧ್ಯಯನ ನಡೆಸಿದರು. ಹಾಗೆಯೇ ಆ ದೇಶದ ಹೆಸರಾಂತ ಸ್ಥಳಗಳನ್ನು, ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದರು. ತಮ್ಮ ಅರಿವಿನ ದಿಗಂತವನ್ನು ವಿಸ್ತರಿಸಿಕೊಳ್ಳುತ್ತಾ, ವೃತ್ತಿಯಲ್ಲಿ ಪ್ರಾವೀಣ್ಯತೆಯನ್ನು ಹೊಂದಿದರು. ಹತ್ತು ವರ್ಷಗಳ ಕಾಲ ವೃತ್ತಿಯಲ್ಲಿ ಪದೋನ್ನತಿ ಪಡೆಯುತ್ತ ಉತ್ತಮ ತಾಂತ್ರಿಕ ತರಬೇತುದಾರರಾಗಿ ನೇಮಕಗೊಂಡರು. ಪ್ರಸ್ತುತ ಬಸವರಾಜು ಅವರು ದುಬೈನ ಹೆಸರಾಂತ ಸಂಸ್ಥೆಯಾದ ಅಲ್ಫಾಯಿದ್ ರೋಸ್ತಮನಿ (ಅರೋಬಿಯನ್ ಆಟೋಮೊಬೈಲ್ಸ್ – ನಿಸ್ಸಾನ್ ವಿಭಾಗ) ಸಂಸ್ಥೆಯಲ್ಲಿ ೨೦೦೫ರಿಂದ ತಾಂತ್ರಿಕ ತರಬೇತುದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಪ್ರತಿವರ್ಷ ಜಪಾನಿನ ಯೋಕೋಹಾಮಾ ನಗರದಲ್ಲಿ ನಿಸ್ಸಾನ್ ಸಂಸ್ಥೆಯು ಜಾಗತಿಕ ಮಟ್ಟದಲ್ಲಿ ಏರ್ಪಡಿಸಿದ್ದ ನಿಸ್ಟೆಕ್ (ನಿಸ್ಸಾನ್ ಇಂಟರ್‌ನ್ಯಾಷನಲ್ ಸರ್ವೀಸ್ ಟೆಕ್ನಿಕಲ್ ಕಾಂಟೆಸ್ಟ್) ಸ್ಪರ್ಧೆಯಲ್ಲಿ ೨೦೦೭ರಲ್ಲಿ ಇವರ ವಿದ್ಯಾರ್ಥಿಗಳು ಪ್ರಥಮ ಮತ್ತು ದ್ವಿತೀಯ ಸ್ಥಾನಗಳನ್ನು ಪಡೆಯುವುದರೊಂದಿಗೆ ಅತ್ಯುತ್ತಮ ಕೌಶಲ್ಯತೆ (ಎಲೆಕ್ಟ್ರಿಕಲ್ ಮತ್ತು ಚಾಸಿಸ್) ವಿಭಾಗದ ಪದಕವನ್ನು ಪಡೆಯುವಂತಾದುದು ಬಸವರಾಜು ಅವರ ಪರಿಶ್ರಮಕ್ಕೆ ಸಂದ ಫಲ. ಹಾಗೆಯೇ ೨೦೦೮ರಲ್ಲಿ ನಿಸ್ಟೆಕ್ ಸ್ಪರ್ಧೆಯಲ್ಲಿಯೂ ಇವರ ವಿದ್ಯಾರ್ಥಿಗಳು ಪ್ರಥಮ ಮತ್ತು





ತೃತೀಯ ಸ್ಥಾನ ಗಳಿಸುವುದರ ಮೂಲಕ ಸಂಸ್ಥೆಯ ಕೀರ್ತಿಯನ್ನು ಹೆಚ್ಚಿಸಿದ್ದಾರೆ.

***ವಿದೇಶದಲ್ಲಿಯೂ ಕನ್ನಡಾಭಿಮಾನ***

ಶ್ರೀ ಬಸವರಾಜು ಅವರು ವಿದೇಶಿದಲ್ಲಿಯೂ ಕರ್ನಾಟಕ ಸಂಸ್ಕೃತಿಯನ್ನು ಮರೆಯಲಿಲ್ಲ. ಆ ಸಂಸ್ಕೃತಿ ವಿದೇಶದ ನೆಲದಲ್ಲಿಯೂ ಪಸರಿಸುವಂತೆ ಮಾಡಲು ಅಲ್ಲಿನ ಬಸವ ಸಮಿಯ ಹಲವು ಕಾರ್ಯಕ್ರಮಗಳಲ್ಲಿ ಸಕಾರಾತ್ಮಕವಾಗಿ ಒಬ್ಬ ಕ್ರಿಯಾಶೀಲ, ಕನ್ನಡ ಕಾರ್ಯಕರ್ತರಾಗಿ ತಮ್ಮನ್ನು ತೊಡಗಿಸಿಕೊಂಡರು.

***ರಂಗಭೂಮಿ ಕಲಾವಿದರಾಗಿ***

ಮೊದಲಿನಿಂದಲೂ ಬಸವರಾಜು ಅವರಿಗೆ ನಟನೆ ಬಗ್ಗೆ ಆಸಕ್ತಿಯಿದ್ದರೂ ಸೂಕ್ತ ಭೂಮಿಕೆ ದೊರೆಯದೆ ಅವಕಾಶದಿಂದ ವಂಚಿತರಾಗಿದ್ದರು. ಅವರೊಳಗಿನ ನಟನಾ ಪ್ರತಿಭೆ ಸದಾ ತುಡಿಯುತ್ತಿತ್ತು. ಅಲ್ಲಿನ ಬಸವ ಸಮಿತಿಯು ಏರ್ಪಡಿಸಿದ್ದ ಸಾಂಸ್ಕೃತಿಕ ಕಾರ್ಯಕ್ರಮದದಲ್ಲಿ ಹಲವು ನಾಟಕಗಳಲ್ಲಿ ಅಭಿನಯಿಸುವ ಅವಕಾಶ ದೊರೆತು ಅವರೊಬ್ಬ ಪ್ರತಿಭಾವಂತ ಕಲಾವಿದರೆಂದು ಹೆಗ್ಗಳಿಕೆಗೆ ಭಾಜನರಾದರು. ಬಸವ ಜಯಂತಿ ಅಂಗವಾಗಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಬಿಜ್ಜಳನ ಪಾತ್ರವನ್ನು ನಿರ್ವಹಿಸಿ ಪ್ರೇಕ್ಷಕರ ಪ್ರಶಂಸೆಗೆ ಪಾತ್ರರಾದರು.

***ದಾಸೋಹ ಸೇವೆ***

ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀಮಠದಲ್ಲಿ ಮಾಡುತ್ತಿರುವ ದಾಸೋಹ ವ್ಯವಸ್ಥೆಯಿಂದ ಪ್ರೇರಣೆ ಹೊಂದಿದ ಶ್ರೀ ಬಸವರಾಜು ಅವರು ತಾವು ಗಳಿಸಿದ ಹಣದಲ್ಲಿ ಸ್ವಲ್ಪ ಭಾಗವನ್ನಾದರೂ ದಾಸೋಹ ಸೇವೆಗೆ



ದಾಸೋಹ ಸೇವೆ



ಶ್ರೀ ಬಸವರಾಜು ಅವರು ಹುಟ್ಟಿದೂರಿನಲ್ಲಿ ನಿರ್ಮಿಸಿದ ಮನೆಯ ಗೃಹಪ್ರವೇಶ ಸಮಾರಂಭದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು

ಮೀಸಲಿಡಬೇಕೆಂಬ ಸದುದ್ದೇಶದಿಂದ ದುಬೈನಲ್ಲಿರುವ ಕಾರ್ಮಿಕ ನಿವಾಸಗಳಲ್ಲಿ ವಾಸಮಾಡುತ್ತಿರುವ ಕಾರ್ಮಿಕರಿಗೆ ದುಬೈನಲ್ಲಿರುವ ಬಸವ ಸಮಿತಿ ಒಂದು ಹೊತ್ತಿನ ಪ್ರಸಾದ ವ್ಯವಸ್ಥೆ ಮಾಡುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ನೆರವು ನೀಡುತ್ತಾ ಬಂದಿದ್ದಾರೆ.

***ಅತಿಥಿದೇವೋಭವ***

ಕನ್ನಡದ ನೆಲದಿಂದ ದುಬೈಗೆ ಬರುವ ಸಾಹಿತಿಗಳು, ಕಲಾವಿದರು, ಮಠಾಧೀಶರ ಸೇವೆಯನ್ನು ಅತ್ಯಂತ ಪ್ರೀತಿಯಿಂದ, ಶ್ರದ್ಧೆಯಿಂದ ಮಾಡುತ್ತಾ ಬಂದಿದ್ದಾರೆ. ನನ್ನ ಇಷ್ಟೆಲ್ಲಾ ಪ್ರಗತಿಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದವೇ ಕಾರಣ ಎನ್ನುವ ಬಸವರಾಜುರವರು ನನಗೆ ಪೂಜ್ಯ ಶ್ರೀಗಳು ಶ್ರೀಮಠದಲ್ಲಿ ಆಶ್ರಯ ನೀಡದಿದ್ದರೆ ನನ್ನ ಭವಿಷ್ಯವನ್ನು ರೂಪಿಸಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಹಳ್ಳಿಯಲ್ಲಿಯೇ ಇದ್ದು ಕೂಲಿ ಕೆಲಸ ಮಾಡಬೇಕಾಗಿತ್ತು ಎಂದು ಹೇಳುವಾಗ ಭಾವುಕರಾಗುತ್ತಾರೆ. ಪರಮಪೂಜ್ಯ ಶ್ರೀಗಳವರಲ್ಲಿ ಅನನ್ಯ ಭಕ್ತಿ, ಗೌರವ. ಹುಟ್ಟಿದೂರಿಗೆ ಬಂದಾಗಲೆಲ್ಲಾ ಮಠಕ್ಕೆ ಹೋಗಿ ಪೂಜ್ಯರ ದರ್ಶನಾಶೀರ್ವಾದ ಪಡೆದಾಗ ದೊರೆಯುವ ಆನಂದ ತೃಪ್ತಿಯನ್ನು ವರ್ಣಿಸಲು ಶಬ್ದಗಳೇ ಇಲ್ಲ ಎನ್ನುವ ವಿನಮ್ರತೆ.

ಇತ್ತೀಚೆಗೆ ತಮ್ಮ ಹುಟ್ಟಿನೂರಿನಲ್ಲಿ ನೂತನವಾಗಿ ನಿರ್ಮಿಸಿದ ಮನೆಯ ಗೃಹಪ್ರವೇಶಕ್ಕೆ ಪೂಜ್ಯರು ಆಗಮಿಸಿ ಆಶೀರ್ವದಿಸಿದುದು ನನ್ನ ಜೀವನ ಸ್ಮರಣೀಯ ಘಟನೆಗಳಲ್ಲಿ ಒಂದು ಎಂದು ಹೇಳುವಾಗ ಧನ್ಯತಾಭಾವ ಅವರ ಮುಖದಲ್ಲಿ ವ್ಯಕ್ತವಾಗುತ್ತಿತ್ತು.

# ಪೂಜೆ : ಒಂದು ವಿಚಾರ

– ಡಾ|| ವಿಜಯಕುಮಾರ ಮಹಾನುಭಾವಿಗಳು *

**ಪೂ**ಜೆ ಎಂದರೆ ಏನು ? ಪೂಜೆ ಯಾಕೆ ? ಪೂಜೆ ಎಂಬುದು ಕೇವಲ ಆಸ್ತಿಕರಿಗೆ ಮಾತ್ರ ಸಂಬಂಧಿಸಿದ್ದೇ ಅಥವಾ ಇದು ಇತರೆ ಸ್ವರೂಪದಲ್ಲಿ ಬದುಕಿನ ಎಲ್ಲ ಕ್ಷೇತ್ರವನ್ನು ವ್ಯಾಪಿಸಿಕೊಂಡಿದೆಯೆ ? ಈ ಎಲ್ಲ ವಿಚಾರಗಳನ್ನು ಇಲ್ಲಿ ತಿಳಿದುಕೊಳ್ಳೋಣ. ಪೂಜಾ ಶಬ್ದಶಃ ಅರ್ಥ ಏನು ? ಪೂಜಿಸುವುದು, ಆರಾಧಿಸುವುದು, ಭಕ್ತಿ ಮಾಡುವುದು ಎಂಬುದಾಗಿ ಅರ್ಥವಿದೆ. ಪೂಜೆ ಎಂದರೆ ಶೂನ್ಯ, ಪೂರ್ಣ, ಪರಮಾತ್ಮ ಎಂದೂ ಅರ್ಥವಿದೆ. ಪೂಜ್ಯ ವಸ್ತುವನ್ನು ಪೂಜಿಸುವುದು ಪೂಜೆ. ಪೂಜ್ಯ ವಸ್ತು ಯಾವುದು ? ಆಸ್ತಿಕರಿಗೆ ದೇವರು, ಅನುಭಾವಿಗಳಿಗೆ ಪರಮಾತ್ಮ, ರೈತರಿಗೆ ಭೂಮಿ, ವಾಹನ ಚಾಲಕರಿಗೆ ವಾಹನ, ಮುದ್ರಕರಿಗೆ ಮುದ್ರಣ ಯಂತ್ರ, ಸಂಪಾದಕರಿಗೆ ತಾವು ಕುಳಿತುಕೊಳ್ಳುವ ಛೇಂಬರ್, ಅಧಿಕಾರಿಗೆ, ಮಂತ್ರಿಗೆ ತಮ್ಮ ಕುರ್ಚಿ. ಹೀಗೆ ಪೂಜ್ಯ ಅಥವಾ ಗೌರವಾರ್ಹವಾದ ವಸ್ತು ಪ್ರತಿಯೊಬ್ಬರಿಗೂ ಇದೆ. ಪೂಜೆಯು ನಾಡಿನಲ್ಲಿ ವಿಭಿನ್ನ ಅರ್ಥದಲ್ಲಿ ಬಳಕೆಯಲ್ಲಿದೆ. ನಾಡಿನ ಧ್ವಜಕ್ಕೆ ಕನ್ನಡ ರಾಜ್ಯೋತ್ಸವದ ಸಂದರ್ಭದಲ್ಲಿ, ರಾಷ್ಟ್ರಧ್ವಜಕ್ಕೆ ಸ್ವಾತಂತ್ರ್ಯೋತ್ಸವದ ಸಂದರ್ಭದಲ್ಲಿ ನಾವೆಲ್ಲರೂ ವಂದಿಸುತ್ತೇವೆ ಇದು ರಾಷ್ಟ್ರ ಪ್ರೇಮ, ರಾಷ್ಟ್ರಗೌರವವನ್ನು ಹೇಳುತ್ತದೆ. ರೈತರು ಭೂಮಿ ಉಳುವಾಗ ಭೂಮಿ ತಾಯಿ ಎಂದು ವಂದಿಸುತ್ತಾರೆ. ಒಬ್ಬ ಶಿಲ್ಪಿ ಚಾಣ ಹಿಡಿಯುವಾಗ ತನ್ನ ಆಯುಧಗಳಿಗೆ ವಂದಿಸುತ್ತಾನೆ. ಸಂಗೀತ ವಿದೂಷಿಗಳೂ ತಾವು ನುಡಿಸುವ ವಾದ್ಯಗಳಿಗೆ ಗೌರವಿಸುತ್ತಾರೆ, ಪೂಜಿಸುತ್ತಾರೆ. ಇದು ಗೌರವ, ಪ್ರೀತಿ ಸೂಚಕವಾದುದು. ಹೀಗೆ ಪೂಜೆಯೆಂಬುದು ನಾವು ಪಡೆದುಕೊಳ್ಳುವ ಪ್ರಯೋಜನಕ್ಕೆ ಕೃತಜ್ಞತೆಯನ್ನು ಸೂಚಿಸುವುದೇ ಆಗಿದೆ. ವ್ಯಾಪಾರಸ್ಥರು ತಮ್ಮ ತಕ್ಕಡಿಯನ್ನು ಪೂಜಿಸುತ್ತಾರೆ, ದುಡ್ಡಿನ ತಿಜೋರಿಯನ್ನು ಪೂಜಿಸುತ್ತಾರೆ. ಪೂಜೆ ಎಂಬುದು ಕೇವಲ ಮೂರ್ತಿ ಪೂಜೆಗೆ ಮಾತ್ರವಲ್ಲ; ಬದುಕಿನ ವಿವಿಧ ಕ್ಷೇತ್ರಗಳಲ್ಲಿ ಕೃತಜ್ಞತೆಯ ಕಾರಣವಾಗಿ ನಡೆಯುವುದನ್ನು ಕಾಣುತ್ತೇವೆ.

ಈ ಜಡವಸ್ತುಗಳಿಗೆ ಪೂಜೆ ಯಾಕೆ ಬೇಕು ? ಎಂದು ನಾಸ್ತಿಕರು, ವಿಚಾರವಂತರು ಪ್ರಶ್ನೆ ಮಾಡಬಹುದು. ಪೂಜೆಯು ಕೇವಲ ಆರಾಧನೆಯಾಗಿ ಮಾತ್ರ ಉಳಿದಿಲ್ಲ. ಕಾರನ್ನು ಚಾಲಕ ಪೂಜಿಸುತ್ತಾನೆ. ಪೂಜೆಗೆ ಮುಂಚೆ ಚೆನ್ನಾಗಿ ಅದನ್ನು ತೊಳೆಯುತ್ತಾನೆ. ಇಲ್ಲಿ ಪೂಜೆಯು ಉಪಯುಕ್ತತೆಯ ದೃಷ್ಟಿಯಿಂದ ಆಚರಣೆಯಲ್ಲಿದೆ. ಹಾಗೆ ವ್ಯವಹಾರದಲ್ಲಿ ಕೂಡ ಇದೆ. ರೈತರು ಭೂಮಿಯನ್ನು ಪೂಜಿಸುವುದು ಈ ಭೂಮಿಯಿಂದ ನಾನು ಬೆಳೆ ಪಡೆಯುತ್ತೇನೆ ಎನ್ನುವ ಕೃತಜ್ಞತೆಯಿಂದ. ಮನೆಯನ್ನು ಕೂಡ ಪೂಜಿಸುತ್ತಾನೆ. ನಿವೇಶನ ಕಟ್ಟಲು ಆರಂಭಿಸುವಾಗ ಪೂಜಿಸುತ್ತೇವೆ. ಇದು ಕೂಡ ಭೂಮಿ ಪೂಜೆ. ಇದನ್ನು ನಾವು ವಾಸ ಮಾಡುವ ನಿವೇಶನ, ಕಟ್ಟಡ ನಮಗೆ ಒಳ್ಳೆಯದು ಮಾಡಲಿ ಎನ್ನುವ ಭಾವನೆಯಿಂದ ಪೂಜಿಸುತ್ತೇವೆ. ಎಂದರೆ ನಮಗೆ ಲೋಕದ ಉಪಯುಕ್ತ ವಸ್ತುಗಳ ಜೊತೆ ಒಂದು ಪ್ರೀತಿಯ ಭಾವನಾತ್ಮಕ ಸಂಬಂಧವಿದೆ. ಈ ಭಾವನಾತ್ಮಕ ಸಂಬಂಧವನ್ನು ನಾವು ಪ್ರಕಟಪಡಿಸಲು ಇರುವ ದಾರಿ ಹೂಗಳಿಂದ ಪೂಜಾ ವಸ್ತುಗಳಿಂದ ಪೂಜಿಸುವುದು ಗೌರವಿಸುವುದೇ ಆಗಿದೆ. ಎಂದರೆ ಯಾವ ವಸ್ತುಗಳಿಂದ ನಮಗೆ ಪ್ರಯೋಜನ, ಲಾಭವಿದೆಯೋ ಅವುಗಳನ್ನು ಗೌರವಿಸುವ, ಪ್ರೀತಿ ಪ್ರಕಟಿಸುವ ದಾರಿಯೇ ಪೂಜೆ. ಇದು ವ್ಯವಹಾರಿಕ ದೃಷ್ಟಿಯಿಂದ ಆಯಿತು. ಇನ್ನು ಪೂಜೆ ಎಂಬುದು ಭಕ್ತಿಯ ಸ್ವರೂಪದಲ್ಲಿ ಇದೆ. ಇದನ್ನು ತಿಳಿದು ಕೊಳ್ಳೋಣ.

ಜಗತ್ತಿನಲ್ಲಿ ಅನೇಕ ದೇವರುಗಳ ಉಪಾಸನೆಯನ್ನು ನಾವು ಕಾಣುತ್ತೇವೆ. ಇಲ್ಲೆಲ್ಲ ಪ್ರಕಟವಾಗುವುದು ಭಕ್ತಿ. ಈ ದೇವರು ನಮಗಿಂತಲೂ ಶಕ್ತಿಸಾಲಿಯಾದ ವನು. ನಾವು ಸಾಯುವವರು ದೇವರಿಗೆ ಸಾವಿಲ್ಲ. ನಾವು ಹುಟ್ಟುವವರು ದೇವರು ಹುಟ್ಟುವುದಿಲ್ಲ. ನಾವು ಹಸಿವು, ತೃಷೆ, ವ್ಯಸನಗಳಿಗೆ ಸಿಕ್ಕಿದವರು. ದೇವರಿಗೆ ಇವು ಯಾವುದೂ ಇಲ್ಲ. ಮನುಷ್ಯನಿಗೆ ಎಲ್ಲ ಜೀವಿಗಳಿಗೆ ಕಷ್ಟವಿದೆ. ದೇವರಿಗೆ ಕಷ್ಟಗಳಿಲ್ಲ. ನಮ್ಮ ಕಷ್ಟಗಳನ್ನು ಅವನು ಪರಿಹಾರ ಮಾಡುತ್ತಾನೆ. ನಾವು ಪೂಜಿಸಿದರೆ ಪ್ರಾರ್ಥಿಸಿದರೆ, ಕರೆದರೆ ದೇವರು ನಮ್ಮ ಕರೆಗಳಿಗೆ ಓಗೊಟ್ಟು ದರ್ಶನ ಕೊಡುತ್ತಾನೆ. ನಮ್ಮ ಇಷ್ಟಾರ್ಥಗಳನ್ನು ನೆರವೇರಿಸುತ್ತಾನೆ. ಈ ಬಗೆಯ ಭಾವನೆಗಳನ್ನಿರಿಸಿಕೊಂಡು ದೇವರನ್ನು ಪೂಜಿಸಲಾಗುತ್ತದೆ. ಇಂತಹ ಪೂಜೆಯು ಲೋಕದಲ್ಲಿ ಎರಡು ಬಗೆಯಲ್ಲಿದೆ. ಒಂದು ಸಗುಣ ಪೂಜೆ. ಇನ್ನೊಂದು ನಿರ್ಗುಣ ಪೂಜೆ. ಸಗುಣ ಎಂದರೆ ದೇವರು ನಮ್ಮ ಹಾಗೆ ಗುಣಗಳಲ್ಲಿ ಇರುವವನು ಎಂಬ ನಂಬಿಕೆ. ನಿರ್ಗುಣ ಎಂದರೆ ಮನುಷ್ಯ ಗುಣಗಳನ್ನು ಮೀರಿದವರು. ಇಂತಹ ದೇವರನ್ನು ಕೇವಲ ಪೂಜೆ ಭಕ್ತಿಯಿಂದ ಒಲಿಸಲು ಬರುವುದಿಲ್ಲ ಎನ್ನು ವಿಚಾರ, ಚಿಂತನೆಗಳಿವೆ.

ಸಗುಣೋಪಾಸನೆ ಎಂದರೇನು ? ನಿರ್ಗುಣೋಪಾಸನೆ ಯೆಂದರೇನು ತಿಳಿಯುವ. ಸಗುಣೋಪಾಸನೆಯು ದೇವರನ್ನು ಮನುಷ್ಯರಂತೆ ಕಲ್ಪಿಸಿಕೊಂಡು ಪುರುಷ ಅಥವಾ ಮಹಿಳೆ ಎನ್ನುವ ಸ್ವರೂಪದಲ್ಲಿ ದೇವರನ್ನು ರೂಪಿಸಿಕೊಂಡು ನಡೆಸಿಕೊಂಡು ಬಂದಿರುವ ಪೂಜೆ. ದೇವರನ್ನೆ ಒಪ್ಪದ ಜೈನ ಧರ್ಮವು ಕೂಡ ಪದ್ಮಾವತಿ, ಯಕ್ಷಿಯರು ಎಂದು ಪರಿಕಲ್ಪನೆ ಮಾಡಿ ಪೂಜಿಸಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ದೇವರನ್ನು ಒಪ್ಪದ, ದೇವರು ಇಲ್ಲ ಎಂದು ಹೇಳುವ ಬೌದ್ಧ ಧರ್ಮದಲ್ಲಿ ಬುದ್ಧನನ್ನೆ ಮೂರ್ತಿಕರಿಸಿ ಪೂಜಿಸಿಕೊಂಡು ಬರುತ್ತಿರುವುದನ್ನು ನಾವು ಕಾಣುತ್ತೇವೆ. ಎಂದರೆ ಪೂಜೆಯನ್ನು ಬೇಡ ಎಂದು ಹೇಳುವವರು ಕೂಡ ಜಗತ್ತಿನಲ್ಲಿ ಒಂದಲ್ಲ ಒಂದು ರೀತಿ ಪೂಜೆ ಮಾಡುವುದನ್ನು ನಾವು ಕಾಣುತ್ತೇವೆ. ಪೂಜೆ ಎಂಬುದು ವಸ್ತು ಅಥವಾ ವ್ಯಕ್ತಿಗಳ ವಿಚಾರದಲ್ಲಿ ಒಂದು ಭಾವನಾತ್ಮಕವಾದ ಪ್ರೀತಿಯನ್ನು ಸೂಚಿಸುತ್ತದೆ. ದೇವರ ಪರಿಕಲ್ಪನೆಯನ್ನು ಮುಂದಿರಿಸಿ ಕೊಂಡು ಪೂಜಿಸುವಾಗ ಫಲಾಪೇಕ್ಷೆ, ಪ್ರಯೋಜನದ ದೃಷ್ಟಿಯಿಂದ ಪೂಜಿಸಲಾಗುತ್ತದೆ. ಇದು ಸಗುಣ ಭಕ್ತಿ. ಮಹಾತ್ಮರನ್ನು ಪೂಜಿಸುವಾಗ ಅವರ ತತ್ತ್ವಗಳನ್ನು ಗೌರವಿಸುವ ಸೂಚನೆಯಾಗಿ ವ್ಯಕ್ತವಾಗುತ್ತದೆ. ಇದು ತಾತ್ವಿಕ ಭಕ್ತಿ.

ನಿರ್ಗುಣೋಪಾಸನೆ ಎಂದರೇನು ? ದೇವರು ಗುಣಗಳಿಂದ ಮೀರಿದವನು. ಈ ದೇವರು ನಮ್ಮ ಭಕ್ತಿಗೆ ಅತೀತನು. ಇವನನ್ನು ಕೇವಲ ಪೂಜಿಸುವುದರಿಂದ ಒಲಿಸಿಕೊಳ್ಳಲು ಬರುವುದಿಲ್ಲ. ಇವನು ನಮ್ಮ ಪಾಪಗಳನ್ನು ಕಳೆದು ಮೋಕ್ಷವನ್ನು ಕರುಣಿಸುವವನು. ಇಂತಹ ಪರಮಾತ್ಮನನ್ನು ಒಲಿಸಲು ಇನ್ನೂ ವಿಶೇಷವಾದ ಭಕ್ತಿಬೇಕು. ತಪಸ್ಸು, ಅನುಷ್ಠಾನ, ಅಷ್ಟಾವಿಧಾರ್ಚನೆ ಮುಂತಾದ ರೀತಿಯಲ್ಲಿ ಭಕ್ತಿಯನ್ನು ನಡೆಸಲಾಗುತ್ತದೆ. ಇಲ್ಲಿ ಆಕಾರವನ್ನು ಮೀರಿದ ಪರಮಾತ್ಮನನ್ನು ಕುರಿತು ಪೂಜೆ ನಡೆಯುತ್ತದೆ. ಇಲ್ಲಿ ಫಲಾಪೇಕ್ಷೆಯ ಭಕ್ತಿ ಇರುವುದಿಲ್ಲ. ಇಲ್ಲಿ ಭಕ್ತಿಗೆ ಪ್ರಾರ್ಥಿಸುವುದು ಮುಕ್ತಿಯನ್ನು ಮಾತ್ರ.

ಎಂಟು ವಿಧದ ಪೂಜಾ ವಸ್ತುಗಳನ್ನು ಪೂಜೆಗೆ ಬಳಸಲಾಗುತ್ತದೆ. ಇದನ್ನು ಅಷ್ಟವಿಧಾರ್ಚನೆ ಎಂದು ಕರೆಯಲಾಗುತ್ತದೆ. ಜಲ, ಭಸ್ಮ, ಗಂಧ, ಅಕ್ಷತೆ, ಪತ್ರೆ, ಪುಷ್ಪ, ದೀಪ, ಧೂಪ, ನೈವೇದ್ಯ ಇವೆಲ್ಲ ಪೂಜಾ ವಸ್ತುಗಳು ಪರಿಮಳಯುಕ್ತವಾಗಿವೆ. ಮತ್ತು ನಮ್ಮ ಹಸಿವನ್ನು ಹಿಂಗಿಸುತ್ತವೆ. ನಮ್ಮ ಕಾಯಿಲೆಯನ್ನು ಗುಣಪಡಿಸುತ್ತವೆ. ಇವುಗಳಿಂದ ದೇವರನ್ನು ಪೂಜಿಸುವ ಅರ್ಥವಾದರೂ ಏನು ? ಜಲ ದೇವರನ್ನು ಶುದ್ಧಿ ಮಾಡುವ ಮೊದಲು ಜಲದಿಂದ ನಮ್ಮನ್ನು ಶುದ್ಧಿಮಾಡಿಕೊಳ್ಳುತ್ತೇವೆ. ಎಂದರೆ ಪೂಜೆಯ ಉದ್ದೇಶ ವ್ಯಕ್ತಿಯು ಪರಿಶುದ್ಧಿಯಾಗಬೇಕೆಂಬುದೇ ಆಗಿದೆ. ದೇವರ ಪೂಜೆಯ ಸಂದರ್ಭದಲ್ಲಿ ವ್ಯಕ್ತಿಯನ್ನು ಪರಿಶುದ್ಧಿಯ ಕಡೆಗೆ ಹೊರಳಿಸುವ ಕ್ರಿಯೆ ಪೂಜೆಯಲ್ಲಿದೆ. ಗಂಧ ಮತ್ತು ಅಕ್ಷತೆಯ ಅರ್ಪಣೆಯ ಪರಿಮಳಯುಕ್ತ ವಾದುದು. ಇವು ಕೂಡ ವ್ಯಕ್ತಿ ಮತ್ತು ಪರಿಸರವನ್ನು ಸುಗಂಧಯುಕ್ತವಾಗಿಸುವ, ಆರೋಗ್ಯವಾಗಿಡುವ ಸೂಚನೆಯಾಗಿದೆ. ನಮ್ಮ ಪರಿಸರ ಮತ್ತು ನಾವು ಆರೋಗ್ಯವಿದ್ದರೆ ಮಾತ್ರ ನಾವು ಇಲ್ಲಿ ಏನಾದರೂ ಸಾಧನೆ ಮಾಡಲು ಸಾಧ್ಯ. ಇನ್ನು ಹೂ, ಪತ್ರೆ ಇವುಗಳನ್ನು ಬಿಡಿಸಿ ತರುವ ಸಂದರ್ಭವನ್ನೊಮ್ಮೆ ನಾವು ಪರಿಕಲ್ಪನೆ ಮಾಡಿಕೊಳ್ಳಬೇಕು. ಒಂದು ಹೂವು ಅದರ ಬಣ್ಣ, ಪರಿಮಳ, ಸಸ್ಯದ ಹಸಿರು ನಮ್ಮಲ್ಲಿ ಭಾವನೆಗಳನ್ನು ಅರಳಿಸುತ್ತದೆ. ಹೂ ಬಿಡಿಸುವುದು ಸಾಮಾನ್ಯವಾಗಿ ಸುಪ್ರಭಾತದ ಸಮಯದಲ್ಲಿ. ಆ ಕಾಲಕ್ಕೆ ಬೆಳಗಿನ ವಾತಾವರಣ, ಸೂರ್ಯೋದಯ ಇವೆಲ್ಲ ನಮ್ಮ ಭಾವನೆಗಳನ್ನು ಸುಂದರಗೊಳಿಸುತ್ತವೆ. ಉಲ್ಲಾಸಗೊಳಿಸುತ್ತದೆ. ಮನುಷ್ಯನು ಸೋಮಾರಿ, ಆಲಸಿಯಾಗದೆ ಸೂರ್ಯೋದಯದ ಸೌಂದರ್ಯವನ್ನು ಗಮನಿಸಬಹುದು. ಪ್ರಕೃತಿಯ ಪ್ರಫುಲ್ಲ ಅನುಭವಗಳನ್ನು ಅನುಭವಿಸುತ್ತ ಜೀವನದಲ್ಲಿ ಉತ್ಸಾಹಿಯಾಗಿ ತೊಡಗಿಕೊಳ್ಳಲು ಈ ದೃಶ್ಯಗಳೆಲ್ಲ ಪ್ರೇರಣೆ ನೀಡುತ್ತವೆ. ಹೀಗೆ ಪೂಜೆಗೆ ಬಳಸುವ ಪೂಜಾ ವಸ್ತುಗಳು ನಮ್ಮ ಮನಸ್ಸನ್ನು ಅರಳಿಸುತ್ತವೆ. ಪ್ರಕೃತಿಗೆ ಹತ್ತಿರ ಕರೆದುಕೊಂಡು ಹೋಗುತ್ತವೆ. ಗಿಡದಲ್ಲಿ ಅರಳುವ ಹೂವು, ಚಿಗುರುವ ಚಿಗುರು ಅದರ ಬಣ್ಣಗಳು, ವರ್ಣಗಳು ನಮ್ಮನ್ನು ಪ್ರಕೃತಿಗೆ ಮುಖಾಮುಖಿಯಾಗಿಸುತ್ತವೆ. ನಮಗೆ ಸೃಷ್ಟಿಯ ವಿವಿಧ

* ಪರಮಗುರು ಪ್ರಭುದೇವ ಧರ್ಮಪೀಠ, ಜೋಗ್ ಫಾಲ್ಸ್ ಮಠ, ಮಾವಿಗನಗುಂಡಿ ಅಂಚೆ, ಸಿದ್ದಾಪುರ ತಾ||, ಉತ್ತರ ಕನ್ನಡ ಜಿಲ್ಲೆ

ಮುಖಿಗಳು ಪರಿಚಯವಾಗುತ್ತವೆ. ಹೊಸ ಹೊಸ ಪ್ರೇರಣೆಗಳು, ಸ್ಫೂರ್ತಿಯು ಈ ಪ್ರಕೃತಿಯಿಂದ ಮನುಷ್ಯನಿಗೆ ದೊರೆಯುತ್ತದೆ.

ಒಂದು ಹೂವು, ಒಂದು ಚಿಗುರು, ಒಂದು ಸುಗಂಧ ಪತ್ರೆ ಇವುಗಳನ್ನು ನಾವು ಪೂಜಾಕಾಲಕ್ಕೆ ದೇವರಿಗೆ ಅರ್ಪಣೆ ಮಾಡುವಾಗ ನಮ್ಮ ಮನಸ್ಸು ಕೂಡ ಸುಮಧುರ, ಭಕ್ತಿ ಭಾವನೆಗಳನ್ನು ಸರಳವಾಗಿ ಪಡೆದುಕೊಳ್ಳುತ್ತದೆ. ಧೂಪವಂತೂ ಪೂಜಾ ಪರಿಸರದಲ್ಲಿ ಇರುವ ಸೊಳ್ಳೆಗಳನ್ನು ಓಡಿಸುತ್ತದೆ. ಸುತ್ತಲೂ ಸುಗಂಧ ಪರಿಮಳವನ್ನು ಹರಡುತ್ತದೆ. ದೀಪವು ಕತ್ತಲೆಯನ್ನು ಕಳೆದು ಬೆಳಗನ್ನು ಬೆಳಗಿಸುತ್ತದೆ. ವಿದ್ಯುತ್ ಇಲ್ಲದಾಗ ಮನೆಯನ್ನು ಕಲ್ಪಿಸಿಕೊಳ್ಳಿ. ನೈವೇದ್ಯವು ನಮ್ಮ ಹಸಿವನ್ನು ಓಡಿಸುತ್ತದೆ. ಹೀಗೆ ಪೂಜಾ ಸಂದರ್ಭದಲ್ಲಿ ಬಳಸುವ ಎಲ್ಲ ಪೂಜಾವಸ್ತುಗಳೂ ವ್ಯಕ್ತಿಯನ್ನು ಉತ್ಸಾಹ, ವಿವೇಕ, ಪ್ರೇರಣೆಗಳಿಂದ ಬದುಕಿನಲ್ಲಿ ತೊಡಗುವಂತೆ ಮಾಡುತ್ತದೆ. ಈ ಕಾರಣವಾಗಿ ದೇವರು ಇರಲಿ, ಬಿಡಲಿ ಪೂಜಾ ಕ್ರಿಯೆಗಳು ವ್ಯಕ್ತಿಯ ಮನಸ್ಸನ್ನು ಪ್ರಫುಲ್ಲ, ನಿರ್ಮಲಗೊಳಿಸುವ ಕ್ರಿಯೆಯನ್ನು ನಡೆಸುತ್ತವೆ. ಇಂತಹ ಪೂಜಾ ಕ್ರಿಯೆಯಲ್ಲಿ ತೊಡಗಿಕೊಳ್ಳುವ ವ್ಯಕ್ತಿಗಳು ಅರಿವನ್ನು ಪಡೆದುಕೊಂಡ ಜ್ಞಾನಿಗಳಾದರಂತು ಅವರ ಜೀವನವು ಚೇತೋಹರಿಯೂ, ಸುಂದರವೂ ಆಗಿ ಜೀವನವು ನವೋಲ್ಲಾಸಕರವಾಗಿರುತ್ತದೆ.

ಲೋಕದಲ್ಲಿ ನಾವೆಲ್ಲರೂ ಪೂಜಿಸುವ ಆರಾಧ್ಯವಸ್ತುಗಳು ಎಷ್ಟು ಪ್ರಕಾರವಾಗಿವೆ ತಿಳಿಯುವ. ೧. ದೇವತಾ ಪೂಜೆ. ಇದನ್ನು ವರಶಿಪ್ ಆಫ್ ಮೈಥಲಾಜಿಕಲ್ ಡೀಟೀಸ್ ಎನ್ನಲಾಗುತ್ತದೆ. ಪುರಾಣ ಕಲ್ಪಿತ ದೇವತೆಗಳ ಪೂಜೆ. ಪುರಾಣ, ಜನಪದರು ಅನೇಕ ಬಗೆಯ ದೇವತೆಗಳನ್ನು ಸೃಷ್ಟಿಸಿವೆ. ಇವುಗಳ ಸಂಖ್ಯೆಗಳು ಅಗಣಿತ. ಇವು ವಸ್ತು ಸತ್ಯದಲ್ಲಿ ಇರಲಿ, ಬಿಡಲಿ ಇವನ್ನು ಪೂಜಿಸುವ ಜನರು ತಾವು ನಂಬಿದ ದೇವರು ಇದ್ದಾನೆಂದೇ ಭಾವಿಸಿ ಭಕ್ತಿ ಮಾಡುತ್ತಾರೆ. ಕೆಲವು ಸಲ ಭಕ್ತರಿಗೆ ಫಲಾಪೇಕ್ಷೆ ದೊರೆಯದಿದ್ದರೂ ಭಕ್ತಿ ಮಾಡುವವರಿಗೆ ಭಾವನಾತ್ಮಕವಾಗಿ ಒಂದು ಹೊರದಾರಿ ಸಿಗುತ್ತದೆ. ಏಕಾಂತದಲ್ಲಿ ತನ್ನ ಭಾವನೆಗಳನ್ನು ಕವಿ ಪ್ರಕಟ ಮಾಡುವಂತೆ ಭಕ್ತರು ಕೂಡ ತಮ್ಮ ಭಾವುಕ ನೆಲೆಗಳನ್ನು ಭಕ್ತಿಯ ಮೂಲಕ ಪ್ರಕಟ ಮಾಡುತ್ತಾರೆ. ೨. ಪ್ರಾಣಿ ಪೂಜೆಯನ್ನು ಕೂಡ ಲೋಕದಲ್ಲಿ ಕಾಣುತ್ತೇವೆ. ಇದು ಕೃತಜ್ಞತೆಯಿಂದ ಅಥವಾ ಭಯದಿಂದ ಪೂಜಿಸುವುದೇ ಆಗಿದೆ. ಉದಾಹರಣೆಗೆ ಗೋಪೂಜೆ. ಇದರ ಹಾಲು, ಮೊಸರು, ತುಪ್ಪ, ಬೆಣ್ಣೆ, ಮಜ್ಜಿಗೆ, ಸಗಣಿ, ಗಂಜಲ ಇವುಗಳು ಮನುಷ್ಯನಿಗೆ ಪ್ರಯೋಜನಕಾರಿಯಾಗಿವೆ. ರೋಗ ಗುಣಪಡಿಸುವ ಔಷಧಯುಕ್ತವಾಗಿವೆ. ಎತ್ತುಗಳಿಂದ ಬೇಸಾಯಕ್ಕೆ, ಗೊಬ್ಬರಾದಿಗಳಿಗೆ ಪ್ರಯೋಜನವಿದೆ. ಈ ದೃಷ್ಟಿಯಿಂದ ಗೋವುಗಳ ಪೂಜೆಯಿದೆ. ಈ ಕಾರಣವಾಗಿ ಅವುಗಳನ್ನು ಭಕ್ತಿಯಿಂದ ಪೂಜಿಸುತ್ತಾನೆ. ಇದೇ ರೀತಿ ಇತರ ಪ್ರಾಣಿಗಳ ಪೂಜೆಯೂ ಇದೆ. ಎನ್ನಬಹುದು. ಸರ್ಪದ ಪೂಜೆ ಯಾಕೆ ? ಪ್ರಾಣಭಯ. ಸರ್ಪ ಕಚ್ಚಿದರೆ ಕೂಡಲೆ ಸಾವು ಎನ್ನುವ ಭವ ಮನುಷ್ಯನಿಗೆ ಈ ವಿಜ್ಞಾನ ಯುಗದಲ್ಲೂ ಇದೆ. ಹೀಗೆ ಪೂಜೆಗೆ ಸಾವಿರ ಕಾರಣಗಳು ಮನುಷ್ಯನ ಬದುಕಿನಲ್ಲಿ ಇದೆ. ೩. ಪಿತೃಪೂಜೆ. ಎಂದರೆ ಗತಿಸಿದ ಪರಂಪರೆಯ ಪಿತೃಗಳ ಪೂಜೆ. ಅವರು ನಮಗೆ ಜನ್ಮ ಕೊಟ್ಟವರು. ಮಾತು ಕಲಿಸಿದವರು, ಆಸ್ತಿ ಕೊಟ್ಟವರು. ಸಂಸ್ಕೃತಿ ಕಲಿಸಿದವರು. ಈ ಕಾರಣವಾಗಿ ನಮ್ಮ ಪರಂಪರೆ, ಸಂಸ್ಕೃತಿಯನ್ನು ಉಳಿಸುವ ಕಾರಣವಾಗಿ ಇಂತಹ ಪೂಜೆಯನ್ನು ಬೆಳೆಸಲಾಗಿದೆ. ೪. ಪಂಚ ಮಹಾಭೂತಗಳ ಪೂಜೆ. ಭೂಮಿ, ನೀರು, ಅಗ್ನಿ, ಗಾಳಿ, ಆಕಾಶ. ಇವುಗಳನ್ನು ಪಂಚ ಮಹಾಭೂತ ಎನ್ನಲಾಗುತ್ತದೆ. ಜಗತ್ತಿನ ಸಕಲ ಜೀವಜಾಲ ಸೃಷ್ಟಿಯಾದುದೇ ಈ ಪಂಚ ಮಹಾಭೂತಗಳಿಂದ. ಭೂಮಿಯ ಮೇಲೆ ನಾವು ವಾಸಿಸುತ್ತೇವೆ. ಫಸಲು, ಬೆಳೆ ತೆಗೆಯುತ್ತೇವೆ. ನೀರು ಜೀವನಾಧಾರ, ಜೀವಾಧಾರ. ನೀರಿಲ್ಲದೆ ಜೀವವೂ ಇಲ್ಲ. ಜೀವನವೂ ಇಲ್ಲ. ಅಗ್ನಿ, ಸೂರ್ಯ, ಚಂದ್ರರಿಲ್ಲದೆ ಇಲ್ಲಿ ಜೀವ ಹುಟ್ಟಲಾರದು, ಬೆಳೆಯಲಾರದು, ಉಳಿಯಲಾರದು. ಗಾಳಿ ಇದು ಪ್ರಾಣಾಧಾರ. ಇದಿಲ್ಲದೆ ಉಳಿಗಾಲವೇ ಇಲ್ಲ. ಆಕಾಶ ಎಲ್ಲವುಗಳನ್ನು ಒಳಗೊಳ್ಳುವುದೇ ಆಕಾಶ, ಆಗಸ. ಇದೆಲ್ಲವನ್ನೂ ನಾವು ಕೃತಜ್ಞತೆಯಿಂದ ಪೂಜಿಸುತ್ತೇವೆ. ೫. ಇನ್ನು ದೇವರ ಪೂಜೆ. ಎಂದರೆ ಇದುವರೆಗೆ ಉಪಾಸನೆ ಮಾಡಿದ ಎಲ್ಲವುಗಳನ್ನು ಒಳಗೊಳ್ಳುವುದು ಆ ದೇವರು. ಅತೀತವಾದುದು ಆ ದೇವರು. ಮಿತಿಗಳಿಲ್ಲದುದು ಸರ್ವಶಕ್ತ ವಾದುದು ಹೀಗೆ ದೇವರನ್ನು ನಾವು ವ್ಯಾಖ್ಯಾನಿಸಿಕೊಂಡಿದ್ದೇವೆ. ಈ ದೇವರನ್ನು ಪರಮಾತ್ಮ ಹೆಸರಿನಲ್ಲಿ ಅನುಭಾವಿಗಳು, ತಪಸ್ವಿಗಳು ಉಪಾಸನೆ ಮಾಡುತ್ತಾರೆ. ಹೀಗೆ ಪೂಜೆಯು ಮನುಷ್ಯನಿಗೆ ಭಾವಾನಾತ್ಮಕ ಅವಶ್ಯಕತೆಯಾಗಿ ಆಚರಣೆ ಯಲ್ಲಿದೆ. ❑





## ಶ್ರದ್ಧಾಂಜಲಿ

ಶ್ರೀ ಬಿ.ಎಸ್. ಕೆಂಪರಾಜು, ಬಿಟ್ಟಸಂದ್ರ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ, ಇವರು ೧೭-೦೫-೨೦೧೫ರಂದು ಶಿವೈಕ್ಯರಾದರು. ದುಡಿಮೆಯಲ್ಲಿ ತೊಡಗಿಸಿ ಕೊಂಡ ಕಾಯಕಜೀವಿ. ಹುಟ್ಟಿದೂರನ್ನುಬಿಟ್ಟು ಬೆಂಗಳೂರು ನಗರ ಸೇರಿ ದುಡಿಮೆಯೇ ದೈವವೆಂದು ನಂಬಿ ಪ್ರಗತಿಯ ಮೆಟ್ಟಿಲುಗಳನ್ನು ಏರಿದ ಸಾಹಸಿ.

ಸಾಮಾಜಿಕ ಸೇವಾ ಕಾರ್ಯನಿರತರಾಗಿ ಕಲ್ಯಾಣ ಹೌಸಿಂಗ್ ಸಂಸ್ಥೆಯನ್ನು ಸ್ಥಾಪಿಸಿದರು. ಶರಣ ಸೇವಾ ಸಮಾಜ ಮತ್ತು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಜೀವ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಸಾರ್ವಜನಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಏರ್ಪಡಿಸಿ ಕಲಾಪೋಷಕ ರಾಗಿದ್ದರು. ಸಿದ್ಧಗಂಗಾ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನದಲ್ಲಿ ಹತ್ತಾರು ವರ್ಷ ಕ್ರಿಯಾತ್ಮಕವಾಗಿ ಭಾಗ ವಹಿಸಿದ್ದರು. ಪೂಜ್ಯ ಶ್ರೀ ಶ್ರೀಗಳವರ ಗುರುವಂದನಾ ಕಾರ್ಯ ಚಟುವಟಿಕೆಗಳಲಿ ಭಾಗವಹಿಸುತ್ತಿದ್ದರು. ಶ್ರೀ ಶ್ರೀಗಳ ಶತಮಾನೋತ್ಸವದ ಸಂದರ್ಭದಲ್ಲಿ ದಿನಾಂಕ ೦೭-೦೭-೨೦೦೮ರಲ್ಲಿ **'ಸಮಾಜಸೇವಾ ಭಾಸ್ಕರ'** ಎಂದು ಅವರನ್ನು ಗೌರವಿಸಲಾಗಿದೆ. ಅವರ ಆತ್ಮಕ್ಕೆ ಚಿರಶಾಂತಿ ಯನ್ನು ಕರುಣಿಸಲೆಂದು 'ಸಿದ್ಧಗಂಗಾ' ಶ್ರದ್ಧಾಂಜಲಿ ಅರ್ಪಿಸುತ್ತದೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರೆ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳ ಬೇಕೆಂದು ಕೋರುತ್ತೇವೆ.

**ಪ್ರಸ್ತುತ ಆಜೀವ ಚಂದಾ ೨೦೧೫ವರ್ಷದಿಂದ ೧೫೦೦/- ರೂ. ಎಂದು ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ. ಸಂದಾಯ ಮಾಡಿರು ವವರು ಬಾಕಿ ೧೦೦೦/- ರೂ. ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು /ಚೆಕ್ /ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ನಂಬರ್ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.

**'ಸಿದ್ಧಗಂಗಾ'** ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು, 'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೫೯೯. | ಶ್ರೀ ಡಿ. ಚನ್ನಮಲ್ಲಯ್ಯ<br>ಬೆಂಗಳೂರು | ೧,೦೦೦.೦೦ |
| ೬೦೦. | ಶ್ರೀ ಹೆಚ್.ಎಸ್. ಚಂದ್ರಪ್ಪ<br>ತುಮಕೂರು | ೫೦೦.೦೦ |
| ೬೦೧. | ಶ್ರೀ ಎಲ್. ಮಲ್ಲಿಕಾರ್ಜುನಪ್ಪ<br>ತುಮಕೂರು | ೧೦೦೦.೦೦ |
| ೬೦೨. | ಶ್ರೀ ಬಿ. ವಿಶ್ವನಾಥ<br>ಬೆಂಗಳೂರು | ೫೦೦.೦೦ |
| ೬೦೩. | ಶ್ರೀ ಸುಗ್ಗರಾಜಯ್ಯ<br>ಬೆಂಗಳೂರು | ೧೦,೦೦೦.೦೦ |
| ೬೦೪. | ಶ್ರೀ ಜಿ. ಆನಂದ<br>ಬೆಂಗಳೂರು | ೫೦೧.೦೦ |
| ೬೦೫. | ಶ್ರೀ ಬೋಜಣ್ಣ<br>ಹರತಿ | ೧೦೦೦.೦೦ |
| ೬೦೬. | ಶ್ರೀ ಚನ್ನಬಸವಯ್ಯ<br>ಮಲ್ಲರಬಾನವಾಡಿ | ೫೦೧.೦೦ |
| ೬೦೭. | ಶ್ರೀ ಪರಮೇಶ್ವರಯ್ಯ<br>ರಾಣೇಬೆನ್ನೂರು | ೫೦೦.೦೦ |
| ೬೦೮. | ಶ್ರೀ ಎಸ್. ಹೊನ್ನಗಂಗಯ್ಯ<br>ನೆಲಮಂಗಲ | ೫೦೦.೦೦ |
| ೬೦೯. | ಶ್ರೀ ಎ. ಶಿವಣ್ಣ<br>ತುಮಕೂರು | ೨೦೦೦.೦೦ |
| ೬೧೦. | ಶ್ರೀ ಅಡವೀಶಯ್ಯ<br>ವೈಯಾಲಿಕಾವಲ್, ಬೆಂಗಳೂರು | ೧,೦೦,೦೦೧.೦೦ |
| ೬೧೧. | ಶ್ರೀ ಶಿವಕುಮಾರ ಗೀತ<br>ಬೆಂಗಳೂರು | ೧,೦೦೧.೦೦ |
| ೬೧೨. | ಶ್ರೀ ಎಸ್. ಬಸವರಾಜಯ್ಯ<br>ಹೆಗ್ಗೆರೆ | ೫೦೧.೦೦ |
| ೬೧೩. | ಶ್ರೀ ವೀರಪ್ಪ ಎಂ. ಭಾವಿ<br>ದಾವಣಗೆರೆ | ೧೦೦೦.೦೦ |
| ೬೧೪. | ಶ್ರೀ ಬಸವರಾಜು<br>ಬೆಂಗಳೂರು | ೫೦೦.೦೦ |
| ೬೧೫. | ಶ್ರೀ ಎಸ್.ಎಲ್. ಸಿದ್ಧಪ್ಪ<br>ತುಮಕೂರು | ೫೦೦.೦೦ |
| ೬೧೬. | ಶ್ರೀ ಎಂ. ಮಲ್ಲಿಕಾರ್ಜುನಯ್ಯ<br>ಬೆಂಗಳೂರು | ೫೦೦.೦೦ |
| ೬೧೭. | ಶ್ರೀ ಬಿ.ಎಸ್. ಮೋಹನಕುಮಾರ್<br>ದೊಡ್ಡಬಿಲಹ | ೧೦೦೦.೦೦ |
| ೬೧೮. | ಶ್ರೀ ಡಿ.ಬಿ. ಸೋಮಪ್ಪ<br>ಗುಡುಗಡಲೆ | ೧೦೦೦.೦೦ |
| ೬೧೯. | ಶ್ರೀ ಪಿ. ಗಂಗಾಧರಯ್ಯ<br>ಕಲ್ಯ | ೧೦೦೦.೦೦ |
| ೬೨೦. | ಶ್ರೀ ಹೆಚ್.ಎಂ. ಮಹದೇವಪ್ಪ<br>ಮಂಡ್ಯ | ೧೦೦೦.೦೦ |
| ೬೨೧. | ಶ್ರೀ ಎಸ್. ರವಿಕುಮಾರ<br>ನೆಲಮಂಗಲ | ೫೦೦.೦೦ |
| ೬೨೨. | ಶ್ರೀ ಮಲ್ಲಿಕಾರ್ಜುನ ಉಡಿಗಾರ್<br>ಬೆಂಗಳೂರು | ೧೦೦೦.೦೦ |
| ೬೨೩. | ಶ್ರೀ ಎಸ್.ಬಿ. ದಳವಾಯಪ್ಪ<br>ಸೀಗೇಹಳ್ಳಿ | ೧೦,೦೦.೦೦ |
| ೬೨೪. | ಶ್ರೀ ಎಂ.ಸಿ. ಹೊಸಳ್ಳಪ್ಪ<br>ಬೆಂಗಳೂರು | ೫೦೧.೦೦ |
| ೬೨೫. | ಶ್ರೀ ಚನ್ನಬಸವಯ್ಯ ಗುರುವಿನ್<br>ಕಲಬುರ್ಗಿ | ೫೦೧.೦೦ |
| ೬೨೬. | ಶ್ರೀ ಬಿ.ಎಸ್. ಶಿವಮೂರ್ತಿ<br>ಬಾಸೂರು | ೧೦೦೦.೦೦ |
| ೬೨೭. | ಶ್ರೀ ಮಲ್ಲಿಕಾರ್ಜುನ<br>ತುಮಕೂರು | ೫೦೦.೦೦ |
| ೬೨೮. | ಶ್ರೀ ಕೆ.ಜಿ. ಶ್ರೀಕಂಠೇಶ್ವರ<br>ಬೆಂಗಳೂರು | ೫೦೧.೦೦ |
| ೬೨೯. | ಶ್ರೀ ಮೃತ್ಯುಂಜಯ<br>ಬೆಂಗಳೂರು | ೫೧೦.೦೦ |
| ೬೩೦. | ಶ್ರೀ ವಿ.ಎನ್. ಶಿವಣ್ಣ<br>ಬೆಂಗಳೂರು | ೧೦೦೧.೦೦ |
| ೬೩೧. | ಶ್ರೀ ಬಿ.ಎಸ್. ಜಯದೇವ್<br>ಹೊಸದುರ್ಗ | ೧೦೦೧.೦೦ |
| ೬೩೨. | ಶ್ರೀ ಸೋಮಶೇಖರ<br>ಬೆಂಗಳೂರು | ೨೫೦೦.೦೦ |

(ಮುಂದುವರೆಯುತ್ತದೆ)




ತುಮಕೂರಿನಲ್ಲಿ ಏಪ್ರಿಲ್ ಒಂದರ ಸಂಜೆ ಸರ್ಕಾರಿ ಜೂನಿಯಲ್ ಕಾಲೇಜ್ ಮೈದಾನದಲ್ಲಿ ಜನಾಭಿನಂದನ ಸಮಿತಿಯ ವತಿಯಿಂದ ಏರ್ಪಡಿಸಲಾಗಿದ್ದ ಪರಮಪೂಜ್ಯ ಶ್ರೀಗಳವರ ಗುರುವಂದನಾ ಕಾರ್ಯಕ್ರಮವನ್ನು ಆದಿಚುಂಚನಗಿರಿ ಮಠಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ನಿರ್ಮಲಾನಂದ ಸ್ವಾಮಿಗಳವರು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ವೇದಿಕೆಯಲ್ಲಿ ಸಿರಿಗೆರೆ ತರಳಬಾಳು ಜಗದ್ಗುರು ಡಾ. ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು, ಪೂಜ್ಯ ಶ್ರೀ ಶ್ರೀ ವೀರೇಶಾನಂದ ಸರಸ್ವತಿಸ್ವಾಮಿಗಳು, ವಿದ್ವಾಂಸರಾದ ಡಾ. ಹಂಪ ನಾಗರಾಜಯ್ಯ, ನಿವೃತ್ತ ಜಿಲ್ಲಾಧಿಕಾರಿ ಡಾ. ಸಿ. ಸೋಮಶೇಖರ್, ಪ್ರಜಾಪ್ರಗತಿಯ ಸಂಪಾದಕರಾದ ಶ್ರೀ ಎನ್. ನಾಗಣ್ಣ ಮೊದಲಾದ ಗಣ್ಯರು ಉಪಸ್ಥಿತರಿದ್ದರು.




ಕೊಡಗಿನ ಶ್ರೀ ಅರಮೇರಿ ಕಳಂಚೇರಿ ಮಠದಲ್ಲಿ ಮೇ 9 ರಂದು ಏರ್ಪಡಿಸಲಾಗಿದ್ದ ಮಠದ ತ್ರಿಶತಮಾನೋತ್ಸವ ಸಮಾರಂಭದ ದಿವ್ಯಸಾನ್ನಿಧ್ಯ ವಹಿಸಿದ್ದ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ ಶ್ರೀ ಸುತ್ತೂರು ಜಗದ್ಗುರುಗಳು, ದೇಗುಲಮಠದ ಶ್ರೀಗಳವರು, ಧರ್ಮಸ್ಥಳದ ಧರ್ಮಾಧಿಕಾರಿಗಳು, ಶ್ರೀ ಅರಮೇರಿ ಮಠದ ಶ್ರೀಗಳು, ಸಚಿವ ಶ್ರೀ ಹೆಚ್.ಎಸ್. ಮಹದೇವ ಪ್ರಸಾದ್, ಮಾಜಿ ಸಂಸದ ಶ್ರೀ ಎಸ್. ವಿಶ್ವನಾಥ್, ಮೊದಲಾದ ಗಣ್ಯರು ಉಪಸ್ಥಿತರಿದ್ದರು.

Cover printed at : Geetanjali Graphics, B-71, KSSIDC Indl. Area, 6th Block, Rajajinagar, Bangalore-10. Ph : 23404232